तदेवपदमन्विच्छेत् कुत एव हरेर्गुणान् ।
इच्छन् पतति पूर्वस्माधतात् तत्र नोत्थितिः । इति ब्रह्माणे (भाष्य)

A jñānin aspires for anything other than these positions, he can do so.

## फलश्रुत्यधिकरणम् (III-4-7)

ॐ स्वामिनः फलश्रुतिरित्यात्रेयः ॐ (III-4-44)
ॐ सहकार्यन्तरविधिः पक्षेण तृतीयं तद्वतोविध्यादिवत् ॐ (III-4-45)

This adhikaraṇa informs that the result of jñāna acruss to the deities, since, they are the masters of jñāna. This view is stated as the view of Ātreya.

!ब्रह्मविदाप्नोति परम्' इत्यादिश्रुतिसिद्धं यद्भगवत्प्राप्त्यादिज्ञानफलं तद्देवानामेव भवति न प्रजानाम् । तेषामेव इन्द्रियादिप्रेरकत्वेन ज्ञानस्वामित्वात् । एव माचार्यः आत्रेयोऽपि मन्यते । (त.प्र.)

However, Audulomi clarifies that even the men get a little of result like Ṛtvijas getting the result in Satrayāga.

सत्रयागेषु ऋत्विजामपि फलदर्शनादल्पं फलं प्रजानामपि भवतीत्यौडुलोमिः मन्यते । तदर्थं देवैः क्रियमाणत्वात् ।

The ground for the men to get a little of result is explained by pointing out that men are सहकारिन् in respect of providing knowledge. It is something like desciples being सहकारिन् in respect of undertaking the teaching programme be the teacher. The teacher gets the major benefit of teaching while student also gets a little. Similarly the deities get the larger benefit for providing the knowledge and the men also get a little of it.

## कृत्स्नभावाधिकरणम् (III-4-8)

ॐ कृत्स्नभावात्तु गृहिणोपसंहारः ॐ (III-4-47)
ॐ मौनवदितरेषामप्युपदेशात् ॐ (III-4-48)

This adhikaraṇa informs that among the men an ascetic is Superior to a house holder. However, a house holder deity is superior to an ascetic among men.

यतेरेव सर्वाश्रमेषु उत्तमत्वं न गृहिणः । न चैवं गृहिणः उपसंहार विरोधः । तस्य देवताविषयत्वात् । तेषां सम्पूर्णगृहस्य धर्मवत्वेन तद्योग्यत्वात् । संपूर्णयति धर्मस्यापि तेषु सद्भावात् ।

The deities not only observe the duties of house houlder and ascetic but they observe the duties of four āśramas and four varṇas also. Therefore, they

'देवाः एव ब्रह्मचारिणः देवाः एव गृहस्थाः देवाः एव वनस्थाः यथा हि एते मुनयः एवं सर्ववर्णः सर्वाश्रमाः सर्वं हि एते कर्म कुर्वन्ति' इति कौण्डरव्य श्रुतिः । (भाष्य)

## ऐहिकाधिकरणम् (III-4-10)

ॐ ऐहिकमप्रस्तुत प्रतिबन्धे तद्दर्शनात् ॐ (III-4-50)

This adhikaraṇainforms that the seeker will obtain the aparokṣajñāna as soon his practice of sādhana gets its fullness, provided his prārabdhakarma is eliminated. Otherwise he will get it in the subsquent birth when his prārabdha karma is finished.

i) 'आत्मावा अरे द्रष्टव्यः' इति दर्शनार्थं श्रवणादिविधीयते । तच्च दर्शनमैहिकमेव प्रारब्धप्रतिबन्धकाभावे । (भाष्य)

ii) प्रारब्धकर्मसद्भावे जन्मान्तरे तदभावेत्वैहिकमेव इत्यभ्युपगमात् । (त.प्र.)

## मुक्तिफलाधिकरणम् (III-4-11)

ॐ मुक्तिफलानियमः तदवस्थावधृतेः तदवस्थावधृतेः ॐ (III-4-52)

This adhikaraṇa informs that the liberation will be obtained soon after the aparokṣajñāna provided the prārabdha karma is eliminated. Other wise, one par to take subsquent births to get the prārabda karma eliminated.

विद्वानमृतत्वमाप्नोति वात्रा कार्या विचारणा ।
अवसन्नं यदारब्धं कर्म तत्रैव गच्छति ।
न चेद् बहूनि जन्मानि प्राप्यैणन्ते न संशयः ।

### Critical observations

It is agreed by three Bhāṣyakāras that the theme of the third section of third chapter is upāsanā. However, in respect of the arrangement of adhikaraṇas and the counting sūtras, they differe. Sri Madhva counts 68 सूत्रs and arranges them into 42 adhikaraṇas. Sri Rāmānuja counts 64 sūtras and arranges into 26 adhikaranas. Sri Śaṅkara counts 66 sūtras and arranges them into 36 adhikaraṇas. The difference in counting the number of sūtras is due to taking a word or words of a sūtra as a different sūtra to construct a different point to be presented. This again depends upon the theme of the adhikaraṇa or sūtra adopted by each Bhāṣyakāra. Though the three Bhāṣyakāras are agreed that the upāsanā is the theme of this Bhāṣya, they differ in describing the nature of upāsanas described in this pāda and the mode of guṇopasamhāra i.e. selection of guṇas for the meditation.

Sri Madhva bhāṣya explains the types of upāsanas to be performed by each adhikārin depending upon his innate capacity. For this purpose the upāsanas are grouped as these to be performed by Men, Ṛsis and deities. Within this broad classification it is provided

that all adhikārins are eligible to meditate upon four qualities sat, chit, ānanda and ātman. Chaturmukha brahman alone is eligible to meditate upon all qualities of the supreme God while others to have to meditatę upon such number and such types of qualities for which they have innate capacity. The upāsana of the Supreme God is primary duty. However, the other deities who have arisen from different angas of the body of the God have to be meditated upon in that way. For instance, Sūrya arises from the eye of the God, therefore, he has to be meditated upon that ways. In the context of upāsana, Guru has an important place. Hence, selection of Guru and obtaining the grace of Guru are also described. Śrī Madhva bhāṣya arranges all these topics neatly and gives a detailed exposition of the methodology of upāsanā.

Sri Śaṅkara bhāṣya has to face the problem whether saguṇa brahma has to be meditated upon or Nirguṇa brahman. In the case of Nirguṇa brahman the question of guṇopasamhāra i.e. contemplation on the attributes of brahman does not arise. In the case of saguṇa brahman, though, guṇopasamhāra is possible, since, he is not ultimate object to be reached, no useful purpose will be served by meditating upon him. The grouping of vidyas as saguṇa vidyas and nirguṇa vidyas is also not satisfactory. All vidya do narrate the qualities of the brahman. If any vidya does not narrate any quality, then, it is not fit for utilising for meditation. There can be no negetive meditation. In view of this a comparative review of this bhāṣya with other bhāṣyas, adhikaraṇa by adhikaraṇa will not serve any purpose.

Sri Rāmānujabhāṣya has no such difficulty. However, they donot have the scheme of graded eligibility. Therefore, this creates the difficulty to accommodate many sūtras into a single scheme of upāsana.

## II

The fourth section of the fourth chapter is devoted to discuss the importance of jñāna according to the three Bhāṣyakāras. Śrī Madhvabhāṣya explains the importance of Jñāna as primarily leading to liberation and also providing other puruṣārthas secndarily. Śrī Śaṅkara bhāṣya raises the question whether jñāna is the main and independent means of liberation or it is subbordinate karma which is claimed to be the chief means of Puruṣārtha. Sri Rāmānuja also presents the theme of this section in a similar way. This difference in approach influences the formulation of adhikaraṇas and the selection of the topics discussed under each adhikaraṇa. In the earlier section by discussing upāsana giving utmost importance to jñāna it is already made clear that jñāna is the chief means of liberation and it is an independent means of liberation. Therefore, to raise the question whether the jñāna is the chief means or karma is putting the horse before the cart. As a result of this, many sūtras that explain the power of jñāna in different ways are utilised only to show the relative importance of jñāna vis-a-vis karma than going deep into the special role played by jñāna. Śrī Madhva bhāṣya identifies these special roles. It is made clear that the liberation is highest puruṣārtha and aparokṣajñāna is the highest means.

The above observations are very general observations. Dr. B.N.K. Sharma has made a detailed comparative review of all these adhikaraṇas in his monumental work. A critical exposition of the three commentaries of Brahmasūtras.

The above brief summary of sections III and IV of Chapter III is intended to give an idea of the theme and topics of these sections. It is hoped that this will create interest among the modern scholars to study the Bhāṣya and the commentaries deeply and get good grounding in Vedānta philosophy. The brief critical observations are intended to suggest the scope for comparative study and research.

I take this opportunity to thank Dr. Krishnacharya Upadhyaya and Dr. Venkateshacharya for their help in editing this work.

Mahāmahopādhyāya
**Prof. K.T. Pandurangi**
Chairman and Hon. Director
Dvaita Vedanta Studies &
Research Foundation, B'lore.

# ಅಧಿಕರಣಾರ್ಥಸಂಗ್ರಹ

## ತೃತೀಯಾಧ್ಯಾಯದ ತೃತೀಯಪಾದ

ತೃತೀಯಾಧ್ಯಾಯದಲ್ಲಿ ವೈರಾಗ್ಯ, ಭಕ್ತಿ, ಉಪಾಸನಾ ಮತ್ತು ಜ್ಞಾನ ಎಂಬುದಾಗಿ ನಾಲ್ಕು ಪಾದಗಳು. ಈ ಅಧ್ಯಾಯದ ಮೂರನೆಯ ಪಾದದಲ್ಲಿ ಭಗವಂತನನ್ನು ತಿಳಿಯಬೇಕು ಎಂದು ಹೇಳಲಾಗಿದೆ. ಇಲ್ಲಿ ಒಟ್ಟು 42 ಅಧಿಕರಣಗಳು. ಅವುಗಳಲ್ಲಿ ಮೊದಲನೆಯದ್ದು ಸರ್ವವೇದಾಂತ ಪ್ರತ್ಯಯಾಧಿಕರಣ.

1. ಸರ್ವವೇದಾಂತಪ್ರತ್ಯಯಾಧಿಕರಣ
2. ಉಪಸಂಹಾರಾಧಿಕರಣ
3. ಪ್ರಾಪ್ತ್ಯಧಿಕರಣ
4. ಸರ್ವಾಭೇದಾಧಿಕರಣ
5. ಆನಂದಾದ್ಯಧಿಕರಣ
6. ಪ್ರಿಯಶಿರಸ್ತ್ವಾಧಿಕರಣ
7. ಇತರಾಧಿಕರಣ
8. ಆಧ್ಯಾನಾಧಿಕರಣ
9. ಆತ್ಮಗೃಹೀತ್ಯಧಿಕರಣ
10. ಅನ್ವಯಾಧಿಕರಣ
11. ಕಾರ್ಯಾಖ್ಯಾನಾಧಿಕರಣ
12. ಸಮಾನಾಧಿಕರಣ
13. ವಿಶೇಷಾಧಿಕರಣ
14. ಸಂಭೃತ್ಯಧಿಕರಣ
15. ಪುರುಷವಿದ್ಯಾಧಿಕರಣ
16. ವೇಧಾದ್ಯಧಿಕರಣ
17. ಹಾನ್ಯಧಿಕರಣ
18. ಛಂದಾಧಿಕರಣ
19. ಅನಿಯಮಾಧಿಕರಣ
20. ಯಾವದಧಿಕರಣ
21. ಇಯದಾಮನನಾಧಿಕರಣ
22. ವ್ಯತಿಹಾರಾಧಿಕರಣ
23. ಸತ್ಯಾದ್ಯಧಿಕರಣ
24. ಅಥ ಕಾಮಾಧಿಕರಣ
25. ಅಥ ನಿರ್ಧಾರಣಾಧಿಕರಣ
26. ಪ್ರದಾನಾಧಿಕರಣ
27. ಗುರುಪ್ರಸಾದಾಧಿಕರಣ
28. ಪೂರ್ವವಿಕಲ್ಪಾಧಿಕರಣ
29. ವಿದ್ಯಾಧಿಕರಣ
30. ಅಬಾಧಾಧಿಕರಣ
31. ಅನುಬಂಧಾದ್ಯಧಿಕರಣ
32. ದರ್ಶನಭೇದಾಧಿಕರಣ
33. ನ ಸಾಮಾನ್ಯಾಧಿಕರಣ
34. ತದ್ವಿದ್ಧ್ಯಾಧಿಕರಣ
35. ಏಕಾಧಿಕರಣ
36. ಅಂಗಾವಬದ್ಧಾಧಿಕರಣ
37. ಭೂಮಾಧಿಕರಣ
38. ನಾನಾಶಬ್ದಾಧಿಕರಣ
39. ವಿಕಲ್ಪಾಧಿಕರಣ
40. ಕಾಮ್ಯಾಧಿಕರಣ
41. ಅಂಗಾಧಿಕರಣ
42. ನವಾಧಿಕರಣ

## 1. ಸರ್ವವೇದಾಂತಪ್ರತ್ಯಯಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಸಮಗ್ರವೇದಾಧ್ಯಯನವನ್ನು ಮಾಡಿಯೇ ಭಗವಂತನನ್ನು ತಿಳಿಯಬೇಕು ಎಂದು ಹೇಳಲಾಗಿದೆ.

**ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ**
**ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ**
**ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ**
**ಓಂ ಸಲಿಲವಚ್ಚ ತನ್ನಿಯಮಃ ಓಂ**
**ಓಂ ದರ್ಶಯತಿ ಚ ಓಂ**

ವೇದಪ್ರತಿಪಾದ್ಯನಾದ ಬ್ರಹ್ಮನೇ ಈ ಅಧಿಕರಣದ ವಿಷಯ. ಸಮಸ್ತಶಾಖೆಗಳಲ್ಲಿ ಹೇಳಿದ ಪ್ರಕಾರ ಬ್ರಹ್ಮನನ್ನು ತಿಳಿಯಬೇಕೋ ಅಥವಾ ತಮ್ಮ ತಮ್ಮ ಶಾಖೆಗಳಲ್ಲಿ ಹೇಳಿದ ರೀತಿಯಲ್ಲಿ ತಿಳಿಯಬೇಕೋ ಎಂದು ಸಂಶಯ.

ಬ್ರಹ್ಮಜ್ಞಾನಕ್ಕಾಗಿ ಶ್ರವಣಾದಿಗಳನ್ನು ಮಾಡಬೇಕು ಎಂಬ ಸಾಮಾನ್ಯೋಕ್ತಿಯು ಸಂದೇಹಕ್ಕೆ ಕಾರಣ.

ತಮ್ಮ ತಮ್ಮ ಶಾಖೆಯಲ್ಲಿ ಹೇಳಿದ ಪ್ರಕಾರ ಬ್ರಹ್ಮನನ್ನು ತಿಳಿಯಬೇಕು. ಸಮಸ್ತಶಾಖೆಗಳ ಅಧ್ಯಯನವು ಅವಶ್ಯಕವಲ್ಲ. ಬೇರೆ ಬೇರೆ ಶಾಖೆಗಳಿಂದ ಪ್ರತಿಪಾದ್ಯವಾದದ್ದು. ಬೇರೆಯೇ ಆಗಿದೆ. ಸಮಸ್ತಶಾಖೆಗಳ ಜ್ಞಾನದಿಂದಲೇ ಧ್ಯಾನಾಧಿಕಾರಪ್ರಾಪ್ತವಾಗುವದಾದರೆ ಮಂದರಿಗೆ ಧ್ಯಾನಾಧಿಕಾರ ಇಲ್ಲದಂತೆ ಆಗುತ್ತದೆ. ಆದ್ದರಿಂದ ಸ್ವಸ್ವಶಾಖೆಗಳ ಅಧ್ಯಯನವೇ ಸಾಕು. ಸರ್ವಶಾಖಾನಿರ್ಣಾಯಕವಾದ ಬ್ರಹ್ಮಮೀಮಾಂಸಾ ಶಾಸ್ತ್ರವು ಉಪಾದೇಯವಲ್ಲ ಎಂದು ಪೂರ್ವಪಕ್ಷ.

ಇದಕ್ಕೆ ಸಿದ್ಧಾಂತವಚನಗಳು ಹೀಗಿವೆ. ಎಲ್ಲ ಶಾಖೆಗಳಲ್ಲೂ ಹೇಳಿರುವ ರೀತಿಯಲ್ಲಿ ಭಗವಂತನನ್ನು ತಿಳಿಯಬೇಕು. ಕಾಣ್ವರು ಈ ರೀತಿ ತಿಳಿಯಬೇಕು, ಮಾಧ್ಯಂದಿನರು ಹೀಗೆ ತಿಳಿಯಬೇಕು ಎಂದು ಅಧಿಕಾರಿ ವಿಶೇಷದ ನಿರ್ದೇಶನವನ್ನು ಮಾಡಿಲ್ಲ ಆತ್ಮೇತ್ಯೇವೋಪಾಸೀತ ಎಂದು ವಿಧಿಯು ಸರ್ವಾಧಿಕಾರಿ ಸಾಧಾರಣವಾಗಿದೆ. ಆದ ಕಾರಣ ಧ್ಯಾನಾರ್ಥಿಯು ಸಮಸ್ತವೇದಗಳನ್ನೂ ಓದಿ ಬ್ರಹ್ಮನನ್ನು ತಿಳಿಯಬೇಕು.

## 2. ಉಪಸಂಹಾರಾಧಿಕರಣ

ಈ ಅಧಿಕರಣದಲ್ಲಿ ಸರ್ವವೇದಪ್ರತಿಪಾದ್ಯವಾದ ಯೋಗ್ಯವಾದ ಗುಣಗಳನ್ನು ಅವಶ್ಯವಾಗಿ ಉಪಾಸಿಸಬೇಕು ಎಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ಒಟ್ಟು ನಾಲ್ಕು ಸೂತ್ರಗಳು.

**ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ಓಂ**
**ಓಂ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ಓಂ**
**ಓಂ ನ ವಾ ಪ್ರಕರಣಭೇದಾತ್ಪರೋವರೀಯಸ್ತ್ವಾದಿವತ್ ಓಂ**
**ಓಂ ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ಓಂ**

ಪರಮಾತ್ಮನೇ ಈ ಅಧಿಕರಣದ ವಿಷಯ. ಸಮಸ್ತವೇದಗಳಿಂದ ಹೇಳಲ್ಪಟ್ಟ ಎಲ್ಲ ಗುಣಗಳನ್ನು ಒಂದೇ ಬುದ್ಧಿಯಲ್ಲಿ ಕ್ರೋಢೀಕರಿಸುವದು ಅಸಾಧ್ಯವಾದದ್ದು. ಬುದ್ಧ್ಯಾರೋಹಣಪೂರ್ವಕವಾದ ಧ್ಯಾನೋ-ಪಾಸನೆಯೂ ಸಾಧ್ಯವಿಲ್ಲ. ಜ್ಞಾನವು ಕ್ರಮಭಾವಿಯಾದ್ದರಿಂದ ಅದರ ಸಾಧ್ಯತೆಗಳಿದೆ. ಆದರೆ ಧ್ಯಾನವು ಯುಕ್ತವಾಗುವದಿಲ್ಲವಾದ್ದರಿಂದ ಜ್ಞಾನವೂ ವ್ಯರ್ಥ.

'ಸರ್ವೈರ್ಗುಣೈಸ್ತತ್ರ ತತ್ರ ಪ್ರತೀತ್ಯೈಃ' ಮುಂತಾದ ಶ್ರುತಿಗಳಿಂದ ಯಥಾಶಕ್ತಿ ಎಲ್ಲ ಗುಣಗಳ ಉಪಾಸನೆಯು ವಿಹಿತವಾಗಿದೆ. ಆದಕಾರಣ ಸಮಸ್ತವೇದಗಳಿಂದ ಪ್ರತಿಪಾದ್ಯವಾದ ಆನಂದಾದಿಗುಣಗಳು ಅಪಹತಪಾಪ್ಮತ್ವಾದಿ ದೋಷಾಭಾವಗಳು ಇವುಗಳಲ್ಲಿ ಕೆಲವು ಗುಣಗಳ ಉಪಾಸನೆ ಮಾತ್ರ ಎಂದು ವಿಭಾಗ ಮಾಡದೇ ಎಲ್ಲ ಗುಣಗಳ ಉಪಸಂಹಾರದಿಂದಲೇ ಉಪಾಸಿಸಬೇಕು. ಇಲ್ಲದಿದ್ದರೆ ವಿಧಿವಾಕ್ಯದ ಉಲ್ಲಂಘನೆಯ ದೋಷವು ಪ್ರಾಪ್ತವಾಗುತ್ತದೆ. 'ಸರ್ವೇಗುಣಾ ಸರ್ವದೈವ ಹ್ಯುಪಾಸ್ಯಾಸ್ತೇನೈವ ವಿದ್ವಾನ್ ವಿಧಿಕೃನ್ನಾನ್ಯಥಾ ಸ್ಯಾತ್' ಎಂದು ಶ್ರುತಿವಾಕ್ಯವಿದೆ. ಇಲ್ಲಿ ವೇದೋಕ್ತವಾದ ಎಲ್ಲ ಗುಣಗಳೆಂದರೆ ಭಗವಂತನ ಪೂರ್ಣತ್ವಕ್ಕೆ ವಿರೋಧಿಯಲ್ಲದ ಧರ್ಮಗಳು ಹೊರತಾಗಿ ಅಯೋಗ್ಯವಾದ ರೋದನಾದಿ ದೋಷಗಳಲ್ಲ. ಅಯೋಗ್ಯವಾದ ಧರ್ಮಗಳ ಉಪಾಸನೆಯಿಂದ ಅನರ್ಥವನ್ನು ಶ್ರುತಿಸ್ಮೃತಿಗಳು ಹೇಳಿವೆ.

## 3. ಪ್ರಾಪ್ತ್ಯಧಿಕರಣ

ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ

ಪ್ರಕೃತವಾದ ಗುಣೋಪಸಂಹಾರ ಅನುಪಸಂಹಾರಗಳೇ ವಿಷಯ. ಅದು ಯುಕ್ತವೋ ಅಲ್ಲವೋ ಎಂದು ಸಂಶಯ. ಹಿಂದೆ ಕರ್ತವ್ಯವೆಂದು ಹೇಳಿರುವುದು ಮತ್ತು ವಿರೋಧ ಇದೇ ಸಂಶಯಕ್ಕೆ ಬೀಜ.

ಗುಣೋಪಸಂಹಾರ ಅನುಪಸಂಹಾರಗಳು ಒಬ್ಬನೇ ಉಪಾಸಕನಲ್ಲಿ ವಿರುದ್ಧವಾದದ್ದು. ಆದ್ದರಿಂದ ಯುಕ್ತವಲ್ಲ. ಇವನು ಸರ್ವಗುಣೋಪಸಂಹಾರವನ್ನು ಮಾಡಬೇಕು. ಇವನು ಮಾಡಬಾರದು ಎಂಬ ವಿಭಾಗವು ನಿಯಾಮಕವಿಲ್ಲದಕಾರಣ ಯುಕ್ತವಾಗುವದಿಲ್ಲ ಹೀಗೆ ಅಧಿಕಾರಿನಿರ್ಣಯವಾಗದಿರುವದ-ರಿಂದ ಉಪಸಂಹಾರ ಅನುಪಸಂಹಾರಗಳು ವಿರುದ್ಧವಾಗಿದ್ದು ಅನುಪಪನ್ನವಾಗಿದೆ.

ಯಾರಿಗೆ ಉಪಾಸನಾಕಾಲದಲ್ಲಿ ಎಷ್ಟು ಗುಣಗಳು ಪ್ರತಿಭಾಸವಾಗುತ್ತವೆಯೋ ಅಷ್ಟು ಗುಣಗಳನ್ನು ಧ್ಯಾನಿಸಬೇಕು ಎಂದು ಶ್ರುತಿ ಇರುವದರಿಂದ ರುದ್ರನೇ ಮುಂತಾದವರಿಗೆ ಅವರವರ ಯೋಗ್ಯತೆ-ಗನುಗುಣವಾಗಿ ಹೆಚ್ಚಿನ ಗುಣಗಳು ತೋರುತ್ತವೆ ಬ್ರಹ್ಮನಿಗೆ ಎಲ್ಲ ಗುಣಗಳು ತೋರುತ್ತವೆ ಆದ್ದರಿಂದ ಗುಣೋಪಸಂಹಾರ ಅನುಪಸಂಹಾರಗಳು ವ್ಯಕ್ತಿಭೇದದಿಂದ ಯುಕ್ತವೇ ಆಗಿದೆ.

## 4. ಸರ್ವಾಭೇದಾಧಿಕರಣ

ಈ ಅಧಿಕರಣದಲ್ಲಿ ಸಮಸ್ತಗುಣಗಳನ್ನು ಉಪಾಸಿಸುವ ಬ್ರಹ್ಮಾದಿದೇವತೆಗಳು ಮಹಾಫಲವನ್ನು ಹೊಂದುವರು ಎಂದು ಹೇಳಲಾಗಿದೆ.

**ಓಂ ಸರ್ವಾಭೇದಾದನ್ಯತ್ರೇಮೇ ಓಂ**

ಪ್ರಕೃತವಾದ ಬಹುಗುಣೋಪಸಂಹಾರವೇ ವಿಷಯ. ಅದನ್ನು ಮಾಡಬೇಕೋ ಅಥವಾ ಮಾಡಬಾರದೋ ಎಂದು ಸಂಶಯ. ಎರಡು ವಿಧವಾಗಿಯೂ ಕಂಡಿರುವುದು ಸಂಶಯಕ್ಕೆ ಕಾರಣ.

'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಫಲವನ್ನು ಸಮಾನವಾಗಿ ಹೇಳಿದ್ದಾರೆ. ಉಪಸಂಹಾರವನ್ನು ಮಾಡದಿರುವವನಿಗಿಂತ ಹೆಚ್ಚಿನ ಫಲವನ್ನೇನೂ ಸರ್ವಗುಣ ಉಪಸಂಹಾರ ಮಾಡುವವನಿಗೆ ಹೇಳಿಲ್ಲ. ಹೀಗೆ ಫಲದಲ್ಲಿ ತಾರತಮ್ಯವಿಲ್ಲದಿರುವದರಿಂದ ಸರ್ವಗುಣೋಪಸಂಹಾರದ ಅಗತ್ಯವಿಲ್ಲ ಎಂದು ಪೂರ್ವಪಕ್ಷ.

ಬ್ರಹ್ಮದೇವರು ಸಮಸ್ತವೇದಪ್ರತಿಪಾದ್ಯಗುಣಗಳಲ್ಲಿ ವಿಭಾಗವಿಲ್ಲದೇ ಎಲ್ಲವನ್ನೂ ಉಪಸಂಹಾರ ಮಾಡಿದ್ದರಿಂದಲೇ ಅವರ ಸರ್ವಗುಣಧ್ಯಾನವು ಮಹತ್ತರವಾಗಿದೆ. ಆದಕಾರಣ ಅಸರ್ವಗುಣ-ಧ್ಯಾನಕ್ಕಿಂತಲೂ ಶ್ರೇಷ್ಠಫಲವನ್ನು ಹೊಂದಿದೆ ಎಂದು ನಿರ್ಣಯವಾಗುತ್ತದೆ. ಅಗ್ನಿಷ್ಟೋಮಯಾಗಕ್ಕಿಂತಲೂ ವಾಜಪೇಯವು ಶ್ರೇಷ್ಠವಾದಂತೆ 'ಸಂಪೂರ್ಣೋಪಾಸನಾದ್ ಬ್ರಹ್ಮಾ ಸಂಪೂರ್ಣಾನಂದಭಾಗ್ ಭವೇತ್' ಎಂಬ ಸ್ಮೃತಿಯಿಂದಲೂ ಮಹಾಫಲವು ನಿರ್ಣೀತವಾಗಿದೆ. ಆದ ಕಾರಣ ಸರ್ವಗುಣೋಪಸಂಹಾರವು ಅವಶ್ಯಕವಾಗಿದೆ.

## 5. ಆನಂದಾದ್ಯಧಿಕರಣ

**ಓಂ ಆನಂದಾದಯಃ ಪ್ರಧಾನಸ್ಯ ಓಂ**

ಈ ಅಧಿಕರಣದಲ್ಲಿ ಮುಮುಕ್ಷುವಾದವನು ತಾನು ಹೊಂದಬೇಕಾದ ಮೋಕ್ಷಕ್ಕಾಗಿ ಆನಂದ, ಜ್ಞಾನ, ದೋಷರಹಿತತ್ವ, ಸ್ವಾಮಿತ್ವ ಎಂಬ ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕು ಎಂದು ಹೇಳಲಾಗಿದೆ.

ಭಗವಂತನ ಗುಣಗಳೇ ವಿಷಯ. ಸಾಧಕನಿಗೆ ಉಪಾಸ್ಯವಾದ ಗುಣಗಳ ಸಂಖ್ಯೆಯು ಕ್ಲೃಪ್ತ-ವಾಗಿದೆಯೋ ಅಥವಾ ಇಲ್ಲವೋ ಎಂದು ಸಂಶಯ. ಉಪಾಸನಾವಿಧಿಯಲ್ಲಿ ವಿಶೇಷವನ್ನು ಹೇಳ-ದಿರುವುದೇ ಸಂಶಯಕ್ಕೆ ಕಾರಣ.

ಸಾಧಕನಿಗೆ ಉಪಾಸ್ಯವಾದ ಗುಣಗಳು ಸಂಖ್ಯಾನಿರ್ದೇಶದಿಂದ ಕ್ಲೃಪ್ತವಾಗಿಲ್ಲ. ಕ್ಲೃಪ್ತವಾಗಿದ್ದರೆ ನಾಲ್ಕು ಐದು ಎಂದು ಕೆಲವು ಗುಣಗಳ ಸಮುಚ್ಚಯವನ್ನು ಹೇಳಬೇಕು. ಆದರೆ ಆ ಗುಣಗಳ ಸಮುಚ್ಚಯವನ್ನು ಮಾಡಬೇಕು ಈ ಗುಣಗಳನ್ನು ಅಲ್ಲ ಎಂಬುದಕ್ಕೆ ಯಾವುದೇ ನಿರ್ಣಾಯಕ ಪ್ರಮಾಣವಿಲ್ಲ. ಸ್ವೇಚ್ಛೆಯಿಂದ ಸಮುಚ್ಚಯವು ಆಗಬಹುದು. ಹೀಗೆ ಉಪಾಸ್ಯವಾದ ಗುಣಗಳ ನಿರ್ಣಯವಿಲ್ಲದಿರುವದರಿಂದ ಉಪಾಸನೆಯೇ ಉಪಪನ್ನವಾಗುವುದಿಲ್ಲ.

ಸಾಧಕನಿಂದ ಅವಶ್ಯವಾಗಿ ಉಪಾಸ್ಯವಾದ ಆನಂದಾದಿನಾಲ್ಕು ಗುಣಗಳು ಕ್ಲೃಪ್ತವಾಗಿದೆ. 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂದು ಶ್ರುತಿಹೇಳುವಂತೆ ಅಪೇಕ್ಷಿತ ಫಲಕ್ಕನುಗುಣವಾಗಿ ಜ್ಞಾನಾನಂದಾದಿಗಳ ಉಪಾಸನೆಯನ್ನು ಮಾಡಬೇಕು. ಭಗವಂತನ ಪ್ರೀತಿಗೆ ಕಾರಣವಾದ್ದರಿಂದ ಆತ್ಮತ್ವ

ಅಂದರೆ ಸ್ವಾಮಿತ್ವದ ಉಪಾಸನೆಯು ಕೂಡ ಅವಶ್ಯಕವಾಗಿದೆ. ಈ ರೀತಿ ಸಂಖ್ಯಾನಿರ್ದೇಶದಿಂದ ಗುಣಗಳ ಕ್ಲೃಪ್ತಿ ಇರುವದರಿಂದ ಉಪಾಸನೆಯು ಸಮಂಜಸವೇ ಆಗಿದೆ.

## 6. ಪ್ರಿಯಶಿರಸ್ತ್ವಾದ್ಯಧಿಕರಣ

**ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ**

ಪ್ರಿಯಶಿರಸ್ತ್ವಾದಿಗುಣಗಳೇ ವಿಷಯ. ಎಲ್ಲ ಸಾಧಕರಿಗೂ ಅದು ಉಪಾಸ್ಯವೋ ಅಲ್ಲವೋ ಎಂದು ಸಂಶಯ. ಎರಡು ವಿಧವಾದ ಗುಣಗಳ ಪ್ರತೀತಿಯು ಸಂಶಯಕ್ಕೆ ಕಾರಣ.

'ತಸ್ಯ ಪ್ರಿಯಮೇವ ಶಿರಃ' ಮುಂತಾದ ವಾಕ್ಯಗಳಿಂದ ಪ್ರಿಯಶಿರಸ್ತ್ವ, ಸಾರ್ವಜ್ಞ್ಯ ಮುಂತಾದ ಗುಣಗಳು ಆನಂದ,ಜ್ಞಾನ ಮೊದಲಾದ ಗುಣಗಳ ವಿಶೇಷವೆಂದು ತಿಳಿಯುತ್ತದೆ. ಪ್ರಿಯಶಿರಸ್ತ್ವಾದಿಗಳ ಉಪಾಸನೆಯನ್ನು ಮಾಡದಿದ್ದರೆ ಆನಂದಾದಿಗಳ ಉಪಾಸನೆಯು ಸರಿಯಾಗಿ ಆಗುವದಿಲ್ಲ. ಆನಂದಾದಿಗಳ ಉಪಾಸನೆಯು ಚೆನ್ನಾಗಿ ಆಗದಿದ್ದಾಗ ಮೋಕ್ಷಪ್ರಾಪ್ತಿಯಾಗುವದಿಲ್ಲ. ಹೀಗೆ ಪ್ರಿಯಶಿರಸ್ತ್ವಾದಿಗಳೂ ಸರ್ವೋಪಾಸ್ಯವಾದ್ದರಿಂದ ನಾಲ್ಕು ಗುಣಗಳು ಎಂಬ ನಿಯಮವಿಲ್ಲ.

ಪ್ರಿಯಶಿರಸ್ತ್ವಾದಿಸರ್ವಗುಣಗಳು ಆನಂದಾದಿ ಗುಣಗಳ ವಿಶೇಷವಾಗಿರುವದರಿಂದ ಅವು ಎಲ್ಲರಿಂದಲೂ ಉಪಾಸ್ಯವೆಂದರೆ ಎಲ್ಲರಿಗೂ ಸರ್ವಗುಣೋಪಾಸನಾಯೋಗ್ಯತಾ ಪ್ರಸಂಗವು ಸಂಭವಿಸುತ್ತದೆ. ಆದರೆ ಫಲತಾರತಮ್ಯಾನುಗುಣವಾಗಿ ಉಪಾಸನೆಯಲ್ಲಿ ತಾರತಮ್ಯ ಅವಶ್ಯಕ. ಆದ್ದರಿಂದ ಎಲ್ಲರಿಂದಲೂ ಪ್ರಿಯಶಿರಸ್ತ್ವಾದಿವಿಶೇಷಗುಣಗಳು ಉಪಾಸ್ಯವಲ್ಲ. ಇದರಿಂದ ಮೋಕ್ಷವು ಇಲ್ಲದಂತಾದೀತು ಎಂಬ ಪ್ರಸಂಗವಿಲ್ಲ. ಯೋಗ್ಯಗುಣೋಪಾಸನಾದಿಂದಲೇ ಮೋಕ್ಷವು ದೊರೆಯುತ್ತದೆ. ನಾಲ್ಕು ಗುಣಗಳ ಉಪಾಸನೆಯಿಂದ ಮೋಕ್ಷವು ದೊರೆಯುವದರಿಂದ ಪ್ರಿಯಶಿರಸ್ತ್ವಾದಿಗಳು ಸರ್ವರಿಂದಲೂ ಉಪಾಸ್ಯಗಳಲ್ಲ.

## 7. ಇತರಾಧಿಕರಣ

ದೇವತೆಗಳು ಎಷ್ಟು ಗುಣಗಳಿಂದ ಉಪಾಸನೆ ಮಾಡುತ್ತಾರೆ ಎನ್ನುವದನ್ನು ಈ ಅಧಿಕರಣದಲ್ಲಿ ಹೇಳಿದ್ದಾರೆ.

**ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ**

ಸರ್ವಗುಣಗಳಿಂದ ಮತ್ತು ನಾಲ್ಕುಗುಣಗಳಿಗಿಂತ ಅಧಿಕವಾದ ಗುಣಗಳೇ ವಿಷಯ. ದೇವತೆಗಳಿಗೆ ಅದು ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಫಲಾಧಿಕ್ಯ ಮತ್ತು ವಿಶೇಷ ಕಾಣದಿರುವಿಕೆ ಇದೇ ಸಂಶಯಕ್ಕೆ ಕಾರಣ.

ಬ್ರಹ್ಮದೇವರು ಸರ್ವಗುಣೋಪಾಸನೆಯನ್ನು ಮಾಡಬೇಕು ಎಂಬ ವಿಷಯದಲ್ಲಿ ಆಧಾರವಿದೆ. ಇತರರೆಲ್ಲರೂ ನಾಲ್ಕು ಗುಣಗಳನ್ನು ಉಪಾಸನೆಮಾಡಬೇಕು ಎಂಬ ವಿಷಯದಲ್ಲಿಯೂ ಪ್ರಮಾಣವಿದೆ.

ನಾಲ್ಕಕ್ಕಿಂತ ಹೆಚ್ಚಿನ ಗುಣಗಳ ಉಪಾಸನೆಗೆ ಯೋಗ್ಯತಾನಿರ್ಣಯವಿಲ್ಲ. ಶಕ್ತಿಯಿಂದಲೇ ಯೋಗ್ಯತಾ-ನಿರ್ಣಯ ಎಂದರೆ ಅಯೋಗ್ಯೋಪಾಸನಪ್ರಯತ್ನದಿಂದ ಅನರ್ಥ ಉಂಟಾದೀತು ದೇವತೆಗಳಿಗೆ ಯೋಗ್ಯತಾನಿರ್ಣಯವಾಗದಿರುವದರಿಂದ ಬಹುಗುಣೋಪಾಸನೆಯು ಯುಕ್ತವಾಗುವದಿಲ್ಲ.

ಚತುರ್ಮುಖಬ್ರಹ್ಮದೇವರು ಅಥವಾ ಸರ್ವಜ್ಞರಾದ ಗುರುಗಳು ಆ ದೇವಾದಿಗಳ ಮುಂದಿನ ಫಲಸಿದ್ಧಿಯನ್ನು ತಿಳಿದು ಗುಣಗಳ ನಿಯಮವನ್ನು ಉಪದೇಶಿಸುವರು. ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಮನುಷ್ಯರಿಗಿಂತ ಉತ್ತಮವಾದ ಫಲವಿದೆ ಗುರುಗಳಿಂದ ಉಪದೇಶಿಸಲ್ಪಟ್ಟ ಗುಣಗಳನ್ನು ಶಕ್ತ್ಯನುಸಾರ ಧ್ಯಾನಿಸಿ ಆ ಉತ್ಕೃಷ್ಟಫಲವನ್ನು ಪಡೆಯುವರು. ಆದ್ದರಿಂದ ಯೋಗ್ಯತಾ ನಿರ್ಣಯಕ್ಕನು-ಗುಣವಾಗಿ ದೇವತೆಗಳಿಗೆ ಬಹುಗುಣೋಪಾಸನೆಯು ಯುಕ್ತವಾಗಿದೆ.

## 8. ಆಧ್ಯಾನಾಧಿಕರಣ

**ಓಂ ಆಧ್ಯಾನಾಯ ಪ್ರಯೋಜನಾಭಿವಾತ್ ಓಂ**

ಈ ಅಧಿಕರಣದಲ್ಲಿ ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಗುಣಗಳನ್ನು ಸಂಗ್ರಹಿಸಿ ಉಪಾಸನೆ ಮಾಡಬೇಕು ಎಂದು ಹೇಳಿದ್ದಾರೆ.

ಗುಣೋಪಸಂಹಾರಾನುಪಸಂಹಾರಗಳೇ ವಿಷಯ. ಅದನ್ನು ಮಾಡಬೇಕೋ ಮಾಡಬಾರದೋ ಎಂದು ಸಂಶಯ. ಕರ್ತವ್ಯ ಅಕರ್ತವ್ಯಕ್ರಿಯೆಗಳು ಕಂಡಿರುವುದೇ ಸಂಶಯಕ್ಕೆ ಕಾರಣ.

ಸರ್ವಗುಣೋಪಸಂಹಾರವನ್ನು ಮಾಡದಿದ್ದರೂ ಫಲವಿದೆ ಎಂದು ಹೇಳಿರುವದರಿಂದ ಸರ್ವ-ಗುಣೋಪಸಂಹಾರದ ಅಗತ್ಯವಿಲ್ಲ. ಸರ್ವಗುಣೋಪಸಂಹಾರಕ್ಕಾಗಿ ವೇದಗಳಲ್ಲಿ ಗುಣಗಳನ್ನು ಹೇಳಿರುವ-ದಾದರೆ ಎಲ್ಲ ಗುಣಗಳನ್ನು ಒಂದೇ ಸ್ಥಳದಲ್ಲಿ ಹೇಳಬೇಕಿತ್ತು. ನಾನಾ ಶಾಖೆಗಳಲ್ಲಿ ಗುಣಗಳನ್ನು ಹೇಳ-ಬಾರದಿತ್ತು. ನಾನಾ ಶಾಖೆಗಳಲ್ಲಿ ಗುಣಗಳನ್ನು ಹೇಳಿರುವುದರಿಂದ ಉಪಸಂಹಾರವು ಶಕ್ಯವಲ್ಲ. ಆ ಪ್ರಕರಣಗಳಲ್ಲಿ ಇಷ್ಟನ್ನೇ ಉಪಾಸಿಸಬೇಕೆಂದು ಹೇಳದಿರುವದರಿಂದ ಸರ್ವಗುಣಾನುಪಸಂಹಾರವೂ ಯುಕ್ತವಲ್ಲ. ಹೀಗೆ ಸರ್ವಗುಣೋಪಸಂಹಾರಾನುಪಸಂಹಾರಗಳೆರಡೂ ಅಯುಕ್ತವಾಗಿರುವದರಿಂದ ಉಪಾಸನೆಯು ಸಮಂಜಸವಲ್ಲ ಎಂದು ಪೂರ್ವಪಕ್ಷ.

ಸರ್ವಗುಣೋಪಸಂಹಾರವು ಅಯುಕ್ತವಲ್ಲ. ನಾನಾ ಸ್ಥಾನಗಳಲ್ಲಿ ಹೇಳಿದ ಗುಣಗಳನ್ನು ಬುದ್ಧಿಯಲ್ಲಿ ಕ್ರೋಢೀಕರಿಸಿ ಉಪಾಸನೆಯನ್ನು ಮಾಡಬೇಕು. ಸರ್ವವಿದ್ಯೆಗಳು ಭಗವಂತನ ನಾಮವಾಗಿವೆ. ಅವೆಲ್ಲವು ಭಗವಂತನ ಗುಣಗಳನ್ನು ಹೇಳುತ್ತಿವೆ. ಗುಣಗಳನ್ನು ಹೇಳಿರುವದು ಜ್ಞಾನಕ್ಕೋಸ್ಕರ. ಜ್ಞಾನ ಧ್ಯಾನಕ್ಕೋಸ್ಕರ. ವಿವಿಧ ಶಾಖೆಗಳಲ್ಲಿ ಹೇಳಿದ ಗುಣಗಳ ಉಪಸಂಹಾರ ಮಾಡುವವನಿಗೆ ಮೋಕ್ಷದಲ್ಲಿ ಆನಂದಾತಿಶಯ-ರೂಪವಾದ ಫಲವೂ ದೊರೆಯುತ್ತದೆ. ಪ್ರಯತ್ನವಿಶೇಷ ಪೂರ್ವಕ ಧ್ಯಾನಕ್ಕಾಗಿಯೇ ಗುಣಗಳನ್ನು ನಾನಾಸ್ಥಾನಗಳಲ್ಲಿ ಹೇಳಿರುವುದು. ಹೀಗೆ ವಿಶೇಷ ಫಲವಿರುವದರಿಂದ ಮತ್ತು ಪ್ರಮಾಣಸಿದ್ಧವೂ ಆದ್ದರಿಂದ ಸರ್ವಗುಣೋಪಸಂಹಾರಾನುಪಸಂಹಾರಗಳೆರಡೂ ಕರ್ತವ್ಯವೇ ಆಗಿವೆ.

## 9. ಆತ್ಮಗೃಹೀತ್ಯಧಿಕರಣ

ಈ ಅಧಿಕರಣದಲ್ಲಿ ಇತರರಿಗೆ ನಾಲ್ಕು ಗುಣಗಳ ಉಪಾಸನೆಯೇ ಹೊರತು ಸಕಲಗುಣೋ-ಪಾಸನೆಯಿಲ್ಲ.

**ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ**

ಭಗವಂತನ ಗುಣಗಳೇ ವಿಷಯ. ಸಾಧಕನು ಆನಂದಾದಿನಾಲ್ಕುಗುಣಗಳನ್ನು ಉಪಾಸಿಸಬೇಕೋ ಅಥವಾ ಆತ್ಮತ್ವವನ್ನು ಮಾತ್ರವೋ ? ಆತ್ಮಶಬ್ದಾಚ್ಚ ಎಂಬಲ್ಲಿ ಕೇವಲ ಆತ್ಮತ್ವವನ್ನು ಹೇಳಿದ್ದು ಮತ್ತು ಆನಂದಾದಯಃ ಎಂಬಲ್ಲಿ ನಾಲ್ಕನ್ನು ಹೇಳಿರುವುದು ಸಂಶಯಕ್ಕೆ ಕಾರಣ.

'ಆತ್ಮೇತ್ಯೇವೋಪಾಸೀತ' ಎಂದು ಏವಕಾರಸಹಿತವಾದ ಶ್ರುತಿಯು ಇರುವದರಿಂದ ಆತ್ಮತ್ವವು ಮಾತ್ರ ಎಲ್ಲರಿಂದಲೂ ಉಪಾಸ್ಯವಾಗಿದೆ. ಇತರ ಮೂರು ಗುಣಗಳನ್ನು ಪರಿತ್ಯಜಿಸಿ ಕೇವಲ ಒಂದನ್ನು ಉಪಾಸಿಸುವುದು ಸುಲಭ. ಶೀಘ್ರವಾಗಿ ಈಶ್ವರ ಸಾಕ್ಷಾತ್ಕಾರವು ಆಗುವುದು. ಹೀಗೆ ಆತ್ಮತ್ವವೇ ಎಲ್ಲರಿಂದ ಉಪಾಸ್ಯವಾಗಿರುವಾಗ 'ಆನಂದಾದಯ ಪ್ರಧಾನಸ್ಯ' ಎಂದು ಆನಂದಾದಿ ನಾಲ್ಕು ಗುಣಗಳ ಉಪಾಸನೆಯನ್ನು ಹೇಳಿದ್ದು ಶ್ರುತ್ಯಾದಿವಿರುದ್ಧವಾಗಿದೆ.

ಆನಂದಾದಿ ನಾಲ್ಕು ಗುಣಗಳೂ ಉಪಾಸ್ಯವೇ ಆಗಿವೆ. ಶ್ರುತಿವಿರೋಧವು ಯುಕ್ತವಲ್ಲ. ಶ್ರುತಿಯಲ್ಲಿ-ರುವ ಆತ್ಮಶಬ್ದವು ಕೇವಲ ಆತ್ಮತ್ವವನ್ನು ಮಾತ್ರ ಹೇಳುವದಿಲ್ಲ. ಸತ್ಯಜ್ಞಾನಾದಿವಾಕ್ಯಗಳಲ್ಲಿ ಸತ್ಯಜ್ಞಾನಾದಿ ಪದಗಳಿಂದ ಇತರ ಗುಣಗಳನ್ನೂ ಸ್ವೀಕರಿಸುವಂತೆ ಆತ್ಮಶಬ್ದದಿಂದ ಆನಂದಾದಿಗುಣಗಳನ್ನೂ ಗ್ರಹಿಸಬೇಕು. 'ಅತ್ರ ಹ್ಯೇತೇ ಸರ್ವೇ ಏಕೀಭವಂತಿ' ಎಲ್ಲ ಗುಣಗಳೂ ಆತ್ಮತ್ವದಲ್ಲಿಯೇ ಅಂತರ್ಭಾವವನ್ನು ಹೊಂದುತ್ತವೆ ಎಂದು ಮುಂದಿನ ವಾಕ್ಯವು ಹೇಳುವದರಿಂದ ಆನಂದಾದಿಗಳೂ ಆತ್ಮಶಬ್ದದ ಅರ್ಥವೇ ಆದ ಕಾರಣ 'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಯ ವಿರೋಧವು ಬರುವದಿಲ್ಲ.

## 10. ಅನ್ವಯಾಧಿಕರಣ

ಈ ಅಧಿಕರಣದಲ್ಲಿ ಆತ್ಮಶಬ್ದವು ಭಗವಂತನಲ್ಲಿ ಮಾತ್ರ ಸರ್ವಗುಣಪೂರ್ಣತ್ವವನ್ನು ಹೇಳುತ್ತದೆ ಎಂದು ಹೇಳಲಾಗಿದೆ.

**ಓಂ ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ಓಂ**

ಆತ್ಮಶಬ್ದೋಕ್ತವಾದ ಗುಣಗಳೇ ವಿಷಯ. ಆ ಗುಣಗಳು ಎಲ್ಲರಿಂದಲೂ ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಆನಂದಾದಿಗಳಿಗೆ ಸರ್ವೋಪಾಸ್ಯತ್ವವು ಕಂಡಿದೆ. ಆದರೆ ಪ್ರಿಯ-ಶಿರಸ್ತ್ವಾದಿಗಳು ಸರ್ವೋಪಾಸ್ಯವಾಗಿಲ್ಲ ಇದೇ ಸಂಶಯಕ್ಕೆ ಕಾರಣ.

ಆನಂದಾದಿಸರ್ವಗುಣಗಳು ಆತ್ಮತ್ವದಲ್ಲಿ ಅಂತರ್ಭೂತವಾದ್ದರಿಂದ ಆತ್ಮಶಬ್ದೋಕ್ತಗುಣಗಳೇ ಸರ್ವೋಪಾಸ್ಯವೆಂದು ಹೇಳಿದ್ದು ಸರಿಯಲ್ಲ. ಆನಂದಾದಿಗಳಿಂದ ಭಿನ್ನವಾದ ಸಮಸ್ತಗುಣಗಳೂ ಆತ್ಮತ್ವ-ದಲ್ಲಿ ಸೇರುತ್ತವೆ. ಆದ್ದರಿಂದ ನಾಲ್ಕುಗುಣಗಳನ್ನು ಉಪಾಸಿಸಬೇಕೆಂದು ಕೇಳಿದ ಪುರುಷನಿಗೆ ಆತ್ಮ ಶಬ್ದವು

ನಾಲ್ಕಕ್ಕಿಂತ ಹೆಚ್ಚಿನ ಗುಣಗಳ ಉಪಾಸನೆಗೆ ಯೋಗ್ಯತಾನಿರ್ಣಯವಿಲ್ಲ. ಶಕ್ತಿಯಿಂದಲೇ ಯೋಗ್ಯತಾ-ನಿರ್ಣಯ ಎಂದರೆ ಅಯೋಗ್ಯೋಪಾಸನಪ್ರಯತ್ನದಿಂದ ಅನರ್ಥ ಉಂಟಾದೀತು ದೇವತೆಗಳಿಗೆ ಯೋಗ್ಯತಾನಿರ್ಣಯವಾಗದಿರುವದರಿಂದ ಬಹುಗುಣೋಪಾಸನೆಯು ಯುಕ್ತವಾಗುವದಿಲ್ಲ.

ಚತುರ್ಮುಖಬ್ರಹ್ಮದೇವರು ಅಥವಾ ಸರ್ವಜ್ಞರಾದ ಗುರುಗಳು ಆ ದೇವಾದಿಗಳ ಮುಂದಿನ ಫಲಸಿದ್ಧಿಯನ್ನು ತಿಳಿದು ಗುಣಗಳ ನಿಯಮವನ್ನು ಉಪದೇಶಿಸುವರು. ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಮನುಷ್ಯರಿಗಿಂತ ಉತ್ತಮವಾದ ಫಲವಿದೆ ಗುರುಗಳಿಂದ ಉಪದೇಶಿಸಲ್ಪಟ್ಟ ಗುಣಗಳನ್ನು ಶಕ್ತ್ಯನುಸಾರ ಧ್ಯಾನಿಸಿ ಆ ಉತ್ಕೃಷ್ಟಫಲವನ್ನು ಪಡೆಯುವರು. ಆದ್ದರಿಂದ ಯೋಗ್ಯತಾ ನಿರ್ಣಯಕ್ಕನು-ಗುಣವಾಗಿ ದೇವತೆಗಳಿಗೆ ಬಹುಗುಣೋಪಾಸನೆಯು ಯುಕ್ತವಾಗಿದೆ.

## 8. ಆಧ್ಯಾನಾಧಿಕರಣ

**ಓಂ ಆಧ್ಯಾನಾಯ ಪ್ರಯೋಜನಾಭಿವಾತ್ ಓಂ**

ಈ ಅಧಿಕರಣದಲ್ಲಿ ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಗುಣಗಳನ್ನು ಸಂಗ್ರಹಿಸಿ ಉಪಾಸನೆ ಮಾಡಬೇಕು ಎಂದು ಹೇಳಿದ್ದಾರೆ.

ಗುಣೋಪಸಂಹಾರಾನುಪಸಂಹಾರಗಳೇ ವಿಷಯ. ಅದನ್ನು ಮಾಡಬೇಕೋ ಮಾಡಬಾರದೋ ಎಂದು ಸಂಶಯ. ಕರ್ತವ್ಯ ಅಕರ್ತವ್ಯಕ್ರಿಯೆಗಳು ಕಂಡಿರುವುದೇ ಸಂಶಯಕ್ಕೆ ಕಾರಣ.

ಸರ್ವಗುಣೋಪಸಂಹಾರವನ್ನು ಮಾಡದಿದ್ದರೂ ಫಲವಿದೆ ಎಂದು ಹೇಳಿರುವದರಿಂದ ಸರ್ವ-ಗುಣೋಪಸಂಹಾರದ ಅಗತ್ಯವಿಲ್ಲ. ಸರ್ವಗುಣೋಪಸಂಹಾರಕ್ಕಾಗಿ ವೇದಗಳಲ್ಲಿ ಗುಣಗಳನ್ನು ಹೇಳಿರುವ-ದಾದರೆ ಎಲ್ಲ ಗುಣಗಳನ್ನು ಒಂದೇ ಸ್ಥಳದಲ್ಲಿ ಹೇಳಬೇಕಿತ್ತು. ನಾನಾ ಶಾಖೆಗಳಲ್ಲಿ ಗುಣಗಳನ್ನು ಹೇಳ-ಬಾರದಿತ್ತು. ನಾನಾ ಶಾಖೆಗಳಲ್ಲಿ ಗುಣಗಳನ್ನು ಹೇಳಿರುವುದರಿಂದ ಉಪಸಂಹಾರವು ಶಕ್ಯವಲ್ಲ. ಆ ಪ್ರಕರಣಗಳಲ್ಲಿ ಇಷ್ಟನ್ನೇ ಉಪಾಸಿಸಬೇಕೆಂದು ಹೇಳದಿರುವದರಿಂದ ಸರ್ವಗುಣಾನುಪಸಂಹಾರವೂ ಯುಕ್ತವಲ್ಲ. ಹೀಗೆ ಸರ್ವಗುಣೋಪಸಂಹಾರಾನುಪಸಂಹಾರಗಳೆರಡೂ ಅಯುಕ್ತವಾಗಿರುವದರಿಂದ ಉಪಾಸನೆಯು ಸಮಂಜಸವಲ್ಲ ಎಂದು ಪೂರ್ವಪಕ್ಷ.

ಸರ್ವಗುಣೋಪಸಂಹಾರವು ಅಯುಕ್ತವಲ್ಲ. ನಾನಾ ಸ್ಥಾನಗಳಲ್ಲಿ ಹೇಳಿದ ಗುಣಗಳನ್ನು ಬುದ್ಧಿಯಲ್ಲಿ ಕ್ರೋಢೀಕರಿಸಿ ಉಪಾಸನೆಯನ್ನು ಮಾಡಬೇಕು. ಸರ್ವವಿದ್ಯೆಗಳು ಭಗವಂತನ ನಾಮವಾಗಿವೆ. ಅವೆಲ್ಲವು ಭಗವಂತನ ಗುಣಗಳನ್ನು ಹೇಳುತ್ತಿವೆ. ಗುಣಗಳನ್ನು ಹೇಳಿರುವದು ಜ್ಞಾನಕ್ಕೋಸ್ಕರ. ಜ್ಞಾನ ಧ್ಯಾನಕ್ಕೋಸ್ಕರ. ವಿವಿಧ ಶಾಖೆಗಳಲ್ಲಿ ಹೇಳಿದ ಗುಣಗಳ ಉಪಸಂಹಾರ ಮಾಡುವವನಿಗೆ ಮೋಕ್ಷದಲ್ಲಿ ಆನಂದಾತಿಶಯ-ರೂಪವಾದ ಫಲವೂ ದೊರೆಯುತ್ತದೆ. ಪ್ರಯತ್ನವಿಶೇಷ ಪೂರ್ವಕ ಧ್ಯಾನಕ್ಕಾಗಿಯೇ ಗುಣಗಳನ್ನು ನಾನಾಸ್ಥಾನಗಳಲ್ಲಿ ಹೇಳಿರುವುದು. ಹೀಗೆ ವಿಶೇಷ ಫಲವಿರುವದರಿಂದ ಮತ್ತು ಪ್ರಮಾಣಸಿದ್ಧವೂ ಆದ್ದರಿಂದ ಸರ್ವಗುಣೋಪಸಂಹಾರಾನುಪಸಂಹಾರಗಳೆರಡೂ ಕರ್ತವ್ಯವೇ ಆಗಿವೆ.

## 9. ಆತ್ಮಗೃಹೀತ್ಯಧಿಕರಣ

ಈ ಅಧಿಕರಣದಲ್ಲಿ ಇತರರಿಗೆ ನಾಲ್ಕು ಗುಣಗಳ ಉಪಾಸನೆಯೇ ಹೊರತು ಸಕಲಗುಣೋ-ಪಾಸನೆಯಿಲ್ಲ.

**ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ**

ಭಗವಂತನ ಗುಣಗಳೇ ವಿಷಯ. ಸಾಧಕನು ಆನಂದಾದಿನಾಲ್ಕುಗುಣಗಳನ್ನು ಉಪಾಸಿಸಬೇಕೋ ಅಥವಾ ಆತ್ಮತ್ವವನ್ನು ಮಾತ್ರವೋ ? ಆತ್ಮಶಬ್ದಾಚ್ಚ ಎಂಬಲ್ಲಿ ಕೇವಲ ಆತ್ಮತ್ವವನ್ನು ಹೇಳಿದ್ದು ಮತ್ತು ಆನಂದಾದಯಃ ಎಂಬಲ್ಲಿ ನಾಲ್ಕನ್ನು ಹೇಳಿರುವುದು ಸಂಶಯಕ್ಕೆ ಕಾರಣ.

'ಆತ್ಮೇತ್ಯೋವೋಪಾಸೀತ್' ಎಂದು ಏವಕಾರಸಹಿತವಾದ ಶ್ರುತಿಯು ಇರುವದರಿಂದ ಆತ್ಮತ್ವವು ಮಾತ್ರ ಎಲ್ಲರಿಂದಲೂ ಉಪಾಸ್ಯವಾಗಿದೆ. ಇತರ ಮೂರು ಗುಣಗಳನ್ನು ಪರಿತ್ಯಜಿಸಿ ಕೇವಲ ಒಂದನ್ನು ಉಪಾಸಿಸುವುದು ಸುಲಭ. ಶೀಘ್ರವಾಗಿ ಈಶ್ವರ ಸಾಕ್ಷಾತ್ಕಾರವು ಆಗುವುದು. ಹೀಗೆ ಆತ್ಮತ್ವವೇ ಎಲ್ಲರಿಂದ ಉಪಾಸ್ಯವಾಗಿರುವಾಗ 'ಆನಂದಾದಯ ಪ್ರಧಾನಸ್ಯ' ಎಂದು ಆನಂದಾದಿ ನಾಲ್ಕು ಗುಣಗಳ ಉಪಾಸನೆಯನ್ನು ಹೇಳಿದ್ದು ಶ್ರುತ್ಯಾದಿವಿರುದ್ಧವಾಗಿದೆ.

ಆನಂದಾದಿ ನಾಲ್ಕು ಗುಣಗಳೂ ಉಪಾಸ್ಯವೇ ಆಗಿವೆ. ಶ್ರುತಿವಿರೋಧವು ಯುಕ್ತವಲ್ಲ. ಶ್ರುತಿಯಲ್ಲಿ-ರುವ ಆತ್ಮಶಬ್ದವು ಕೇವಲ ಆತ್ಮತ್ವವನ್ನು ಮಾತ್ರ ಹೇಳುವದಿಲ್ಲ. ಸತ್ಯಜ್ಞಾನಾದಿವಾಕ್ಯಗಳಲ್ಲಿ ಸತ್ಯಜ್ಞಾನಾದಿ ಪದಗಳಿಂದ ಇತರ ಗುಣಗಳನ್ನೂ ಸ್ವೀಕರಿಸುವಂತೆ ಆತ್ಮಶಬ್ದದಿಂದ ಆನಂದಾದಿಗುಣಗಳನ್ನೂ ಗ್ರಹಿಸಬೇಕು. 'ಅತ್ರ ಹ್ಯೇತೇ ಸರ್ವೇ ಏಕೀ'ಭವಂತಿ ಎಲ್ಲ ಗುಣಗಳೂ ಆತ್ಮತ್ವದಲ್ಲಿಯೇ ಅಂತರ್ಭಾವವನ್ನು ಹೊಂದುತ್ತವೆ ಎಂದು ಮುಂದಿನ ವಾಕ್ಯವು ಹೇಳುವದರಿಂದ ಆನಂದಾದಿಗಳೂ ಆತ್ಮಶಬ್ದದ ಅರ್ಥವೇ ಆದ ಕಾರಣ 'ಆತ್ಮೇತ್ಯೇವೋಪಾಸೀತ್' ಎಂಬ ಶ್ರುತಿಯ ವಿರೋಧವು ಬರುವದಿಲ್ಲ.

## 10. ಅನ್ವಯಾಧಿಕರಣ

ಈ ಅಧಿಕರಣದಲ್ಲಿ ಆತ್ಮಶಬ್ದವು ಭಗವಂತನಲ್ಲಿ ಮಾತ್ರ ಸರ್ವಗುಣಪೂರ್ಣತ್ವವನ್ನು ಹೇಳುತ್ತದೆ ಎಂದು ಹೇಳಲಾಗಿದೆ.

**ಓಂ ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ಓಂ**

ಆತ್ಮಶಬ್ದೋಕ್ತವಾದ ಗುಣಗಳೇ ವಿಷಯ. ಆ ಗುಣಗಳು ಎಲ್ಲರಿಂದಲೂ ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಆನಂದಾದಿಗಳಿಗೆ ಸರ್ವೋಪಾಸ್ಯತ್ವವು ಕಂಡಿದೆ. ಆದರೆ ಪ್ರಿಯ-ಶಿರಸ್ತ್ವಾದಿಗಳು ಸರ್ವೋಪಾಸ್ಯವಾಗಿಲ್ಲ ಇದೇ ಸಂಶಯಕ್ಕೆ ಕಾರಣ.

ಆನಂದಾದಿಸರ್ವಗುಣಗಳು ಆತ್ಮತ್ವದಲ್ಲಿ ಅಂತರ್ಭೂತವಾದ್ದರಿಂದ ಆತ್ಮಶಬ್ದೋಕ್ತಗುಣಗಳೇ ಸರ್ವೋಪಾಸ್ಯವೆಂದು ಹೇಳಿದ್ದು ಸರಿಯಲ್ಲ. ಆನಂದಾದಿಗಳಿಂದ ಭಿನ್ನವಾದ ಸಮಸ್ತಗುಣಗಳೂ ಆತ್ಮತ್ವ-ದಲ್ಲಿ ಸೇರುತ್ತವೆ. ಆದ್ದರಿಂದ ನಾಲ್ಕುಗುಣಗಳನ್ನು ಉಪಾಸಿಸಬೇಕೆಂದು ಕೇಳಿದ ಪುರುಷನಿಗೆ ಆತ್ಮ ಶಬ್ದವು

ಗೊಂದಲವನ್ನು ಉಂಟುಮಾಡುತ್ತದೆ. ಇದೇ ರೀತಿ ಉಪಾಸನಾಮಾಡಬೇಕೆಂಬ ವಿಷಯದಲ್ಲಿ ನಿಶ್ಚಾಯಕ-ಪ್ರಮಾಣವಿಲ್ಲ. ಹೀಗೆ ಆತ್ಮಶಬ್ದೋಕ್ತವಾದ ಗುಣಗಳು ಸರ್ವೋಪಾಸ್ಯವಾಗಿಲ್ಲವಾದ್ದರಿಂದ ಅಲ್ಪಗುಣೋಪ-ಸಂಹಾರದ ವಿಷಯದಲ್ಲಿ 'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿವಾಕ್ಯವು ಪ್ರಮಾಣವಾಗುವದಿಲ್ಲ ಎಂದು ಪೂರ್ವಪಕ್ಷ.

ಆತ್ಮಶಬ್ದವು ಸರ್ವಗುಣಗಳನ್ನು ಹೇಳುತ್ತಿದೆ ಎಂಬುದು ಸತ್ಯವಾದ ವಿಷಯ. ಆದರೆ ಬ್ರಹ್ಮಾದಿ-ದೇವತೆಗಳಿಗೆ ಮಾತ್ರ ಯೋಗ್ಯತಾನುಸಾರ ಆತ್ಮಶಬ್ದವು ಅಧಿಕಗುಣಗಳನ್ನು ಪ್ರಕಾಶಪಡಿಸುತ್ತದೆ. ಬೇರೆಯವರಿಗೆ ಅವರ ಯೋಗ್ಯತಾನುಸಾರ ಅಲ್ಪಗುಣಗಳನ್ನು ಪ್ರಕಟಿಸುತ್ತದೆ. ಗೊಂದಲ ಉಂಟು-ಮಾಡುವದಿಲ್ಲ. 'ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ' 'ಬ್ರಹ್ಮಾದೀನಾಮಿತರೇಷಾಂ ನ ಚೈವ' ಎಂದು ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. ಆದ್ದರಿಂದ ಆತ್ಮಶಬ್ದೋಕ್ತವಾದ ಗುಣೋಪಾಸನೆಯು ಎಲ್ಲರಿಗೂ ಇದೆ.

## 11. ಕಾರ್ಯಾಖ್ಯಾನಾಧಿಕರಣ

ಈ ಅಧಿಕರಣದಲ್ಲಿ ಅಲೌಕಿಕವಾದ ಮೋಕ್ಷವನ್ನು ಪಡೆಯಲು ಅಲೌಕಿಕವಾದ ಗುಣಗಳನ್ನೇ ಉಪಾಸನೆಮಾಡಬೇಕು ಎಂದು ಹೇಳಲಾಗಿದೆ.

**ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ**

ಪ್ರಕೃತವಾದ ಭಗವಂತನ ಗುಣಗಳೇ ವಿಷಯ. ಅಲೌಕಿಕವಾದ ಗುಣಗಳನ್ನು ಧ್ಯಾನಿಸಬೇಕೋ ಅಥವಾ ಲೌಕಿಕವಾದ ಗುಣಗಳನ್ನು ಧ್ಯಾನಿಸಬೇಕೋ ? ಎಂದು ಸಂಶಯ. 'ಪರಮತಃ ಸೇತೂನ್ಮಾನ' ಎಂಬ ಸೂತ್ರದಲ್ಲಿ ಅಲೌಕಿಕತ್ವವನ್ನು ಹೇಳಿರುವುದು ಮತ್ತು ಲೋಕದೃಷ್ಟಿಯು ಸಂಶಯಕ್ಕೆ ಕಾರಣ.

ಅಲೌಕಿಕವಾದ ಗುಣಗಳ ಅನುಭವವಿಲ್ಲದಿರುವದರಿಂದ ಸ್ಮೃತಿರೂಪವಾದ ಧ್ಯಾನವು ಸಾಧ್ಯವಿಲ್ಲ. ಆದರೆ ಧ್ಯಾನವು ಕರ್ತವ್ಯವಾಗಿದೆ. ಆದ್ದರಿಂದ ಲೌಕಿಕವಾದ ಗುಣಗಳನ್ನೇ ಧ್ಯಾನಿಸಬೇಕು. ಅವಿದ್ಯಮಾನ-ವಾದದ್ದನ್ನು ಧ್ಯಾನಿಸುವುದು ಯುಕ್ತವಲ್ಲ. ಆದಕಾರಣ ಗುಣಗಳು ಲೌಕಿಕವೇ ಆಗಿದೆ.

ಧ್ಯಾನಕಾರ್ಯವಾದ ಮೋಕ್ಷವು ಅಲೌಕಿಕವಾದ್ದರಿಂದ ಅಲೌಕಿಕವಾದ ಗುಣಗಳನ್ನೇ ಧ್ಯಾನಿಸಬೇಕು. ಈ ರೀತಿಯ ಗುಣದ ಪ್ರತೀತಿಯೇ ಇಲ್ಲ ಎನ್ನಬಾರದು. 'ಶಾಸ್ತ್ರೋಕ್ತವಸ್ತುನಶ್ಚೈವ ವ್ಯುತ್ಪತ್ತಿಶಾಸ್ತ್ರಲಿಂಗತಃ' ಎಂದು ಅನುವ್ಯಾಖ್ಯಾನದ ವಾಕ್ಯದಂತೆ 'ಯಃ ಸಹಸ್ರಾಕ್ಷಃ ಇಂದ್ರಃ' ಇತ್ಯಾದಿಸ್ಥಳಗಳಲ್ಲಿ ಇಂದ್ರಾದಿಶಬ್ದಗಳಿಗೆ ವ್ಯುತ್ಪತ್ತಿ ಉಂಟಾಗುವಂತೆ ಭಗವಂತನ ಗುಣಗಳ ಸಾಕ್ಷಾತ್ಕಾರವನ್ನು ಹೊಂದಿರುವ ಜ್ಞಾನಿಗಳ ಉಪದೇಶ-ದಿಂದ ಸಾದೃಶ್ಯದ ಮೂಲಕವಾಗಿ ಜ್ಞಾನವು ಉಂಟಾಗುತ್ತದೆ. ಲೌಕಿಕಗುಣಗಳಿಗಿಂತ ವಿಲಕ್ಷಣವಾದವುಗಳು ಅತ್ಯುತ್ತಮವಾದವು ಎಂಬ ಧ್ಯಾನವೇ ಕಾರ್ಯವನ್ನು ಹುಟ್ಟಿಸುವದರಿಂದ ಆ ರೀತಿಯ ಧ್ಯಾನವೇ ಯುಕ್ತವಾಗಿದೆ.

## 12. ಸಮಾನಾಧಿಕರಣ

ಈ ಅಧಿಕರಣದಲ್ಲಿ ಸರಸ್ವತಿದೇವಿಯರ ಉಪಾಸನಾಕ್ರಮವನ್ನು ಹೇಳಲಾಗಿದೆ. ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ.

**ಓಂ ಸಮಾನ ಏವಂ ಚಾಭೇದಾತ್ ಓಂ**

**ಓಂ ಸಂಬಂಧಾದೇವಮನ್ಯತ್ರಾಪಿ ಓಂ**

ಪ್ರಕೃತವಾದ ಗುಣೋಪಸನೆಯೇ ಈ ಅಧಿಕರಣದ ವಿಷಯ. ತನ್ನ ಉಪಾಸನೆಗೆ ಅನುಗುಣವಾದ ಫಲವನ್ನು ನಿಡುತ್ತದೆಯೋ ಅಥವಾ ಇಲ್ಲವೋ ಎಂದು ಸಂಶಯ. ಕೃಷ್ಯಾದಿಕ್ರಿಯೆಗಳು ಫಲಪ್ರದವಾಗಿರು-ವುದೂ ಫಲಪ್ರದವಾಗದಿರುವುದೂ ಎರಡೂ ಕಂಡಿದೆ. ಇದೇ ಸಂಶಯಕ್ಕೆ ಕಾರಣ.

ಉಪಾಸನೆಗೆ ಅನುಗುಣವಾಗಿ ಫಲವು ದೊರೆಯುವುದಿಲ್ಲ ಬ್ರಹ್ಮದೇವರು ಸರಸ್ವತೀದೇವಿಯರ ಉಪಾಸನೆಗಳು ಪರಸ್ಪರ ಸಮವೋ ವಿಷಮವೋ ಆಗಿರಬೇಕು. ಎರಡೂ ಆಗುವುದು ವಿರುದ್ಧ. ಆದರೆ ಫಲವು ಸಮವೂ ಆಗಿದೆ. ವಿಷಮವೂ ಆಗಿದೆ. ಸ್ಥಾನೈಕ್ಯವಿರುವುದರಿಂದ ಸಮ, ಗುಣತಾರತಮ್ಯವಿರುವದ-ರಿಂದ ವಿಷಮವಾದ ಕಾರಣ ಉಪಾಸನೆಗೆ ಅನುಗುಣವಾಗಿ ಮೋಕ್ಷದಲ್ಲಿ ಫಲವಾಗುವದಿಲ್ಲ.

ಬ್ರಹ್ಮಸರಸ್ವತಿಯರ ಫಲವು ಯಾವ ರೀತಿ ಸಮತೆ ಮತ್ತು ವಿಷಮತೆಯನ್ನು ಹೊಂದಿದೆಯೋ ಅದರಂತೆ ಉಪಾಸನೆಯೂ ಸಮತೆಯನ್ನು ವಿಷಮತೆಯನ್ನು ಹೊಂದಿದೆ. ಸರಸ್ವತೀದೇವಿಗೆ ಎಲ್ಲ ಗುಣಗಳ ಉಪಾಸನೆ ಇದೆ. ಚತುರ್ಮುಖನಂತೆ ತ್ರಿವಿಕ್ರಮತ್ವಾದಿ ಕ್ರಿಯಾವಿಶೇಷಗಳ ಪ್ರತ್ಯೇಕ ಉಪಾಸನೆ ಇಲ್ಲ-ದಿದ್ದರೂ ಅವೆಲ್ಲವೂ ಸಾಮಾನ್ಯಕ್ರಿಯಾದಲ್ಲೇ ಅಂತರ್ಭಾವವನ್ನು ಹೊಂದುತ್ತವೆ. ಹೀಗೆ ಉಪಾಸನೆಯಲ್ಲಿ ಸಮತ್ವವಿದೆ. ತ್ರಿವಿಕ್ರಮತ್ವಾದಿಕ್ರಿಯಾವಿಶೇಷಗಳ ಉಪಾಸನೆಯು ಯೋಗ್ಯತೆ ಇರುವವರೆಗೆ ಮಾತ್ರ 'ಕದಾಚಿಲ್ಲೋಪಯೇದ್ ದೇವೀ' ಎಂಬ ಪ್ರಮಾಣವಚನದಂತೆ ನಿತ್ಯದಲ್ಲೂ ಹೀಗಾಗಿ ಉಪಾಸನೆಯಲ್ಲಿ ವಿಷಮತ್ವವೂ ಇದೆ ಆದ್ದರಿಂದ ಸ್ಥಾನದಲ್ಲಿ ಸಮಾನತೆ ಇದ್ದರೂ ಆನಂದಾದಿಗುಣಗಳಲ್ಲಿ ವಿಷಮತೆಯು ಯುಕ್ತವೇ ಆಗಿದೆ.

## 13. ವಿಶೇಷಾಧಿಕರಣ

ಈ ಅಧಿಕರಣದಲ್ಲಿ ಆತ್ಮಶಬ್ದದಿಂದ ಯಾರಿಗೆ ಎಷ್ಟು ಗುಣಗಳು ಸ್ಫುರಣವಾಗುತ್ತದೆಯೋ ಅಷ್ಟು ಮಾತ್ರ ಉಪಾಸನೆಗೆ ಯೋಗ್ಯ ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ಎರಡು ಸೂತ್ರಗಳು.

**ಓಂ ನ ವಾ ವಿಶೇಷಾತ್ ಓಂ**

**ಓಂ ದರ್ಶಯತಿ ಚ ಓಂ**

ಆತ್ಮಶಬ್ದೋಕ್ತವಾದ ಗುಣಗಳು ವಿಷಯ. ಎಲ್ಲರಿಂದಲೂ ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಎರಡು ರೀತಿಯ ಗುಣಗಳ ದರ್ಶನವೇ ಸಂಶಯಕ್ಕೆ ಕಾರಣ.

ಆತ್ಮ ಶಬ್ದವು ಸಮಸ್ತಗುಣಗಳನ್ನು ಹೇಳುವದರಿಂದ ಆತ್ಮಶಬ್ದೋಕ್ತಗುಣಗಳು ಸರ್ವೋಪಾಸ್ಯವಲ್ಲ. ಏಕೆಂದರೆ ಸಮಸ್ತಗುಣಗಳ ಉಪಾಸನೆಗೆ ಯೋಗ್ಯತೆಯ ಅಪೇಕ್ಷೆ ಇದೆ. ಅದು ಎಲ್ಲರಿಗೂ ಇರುವದಿಲ್ಲ. ಆತ್ಮಶಬ್ದವು ಉತ್ತಮಾಧಿಕಾರಿಯಾದ ಬ್ರಹ್ಮನನ್ನು ಕುರಿತು ಎಲ್ಲ ಈಶ್ವರಧರ್ಮಗಳನ್ನು ಸರಸ್ವತಿಯನ್ನು ಕುರಿತು ಅಶೇಷಗುಣಗಳನ್ನು ಕ್ರಿಯಾಸಾಮಾನ್ಯವನ್ನು ಇತರರನ್ನು ಕುರಿತು ಅವರ ಉಪಾಸನಾಕ್ಕೆ ಯೋಗ್ಯವಾದ ಗುಣಗಳನ್ನು ಮಾತ್ರ ಈ ರೀತಿ ನ್ಯೂನಾಧಿಕ್ಯವಿಲ್ಲದೆ ಹೇಳುತ್ತದೆ ಎಂದು ಪ್ರತ್ಯೇಕ ನಿಯಮ-ರೂಪವ್ಯವಸ್ಥೆ ಇಲ್ಲ ಆದ ಕಾರಣ ಆತ್ಮಶಬ್ದೋಕ್ತಗುಣಗಳು ಸರ್ವೋಪಾಸ್ಯವಲ್ಲ.

ಆತ್ಮಶಬ್ದೋಕ್ತವಾದ ಗುಣಗಳ ಉಪಾಸನೆಯು ಎಲ್ಲರಿಗೂ ಯುಕ್ತವೇ ಆಗಿದೆ. ಅದು ಎಲ್ಲರಿಗೂ ಎಲ್ಲ ಗುಣಗಳನ್ನೂ ಹೇಳುವದಿಲ್ಲ. ಆತ್ಮಶಬ್ದವು ಸರ್ವಗುಣಗಳನ್ನು ಹೇಳಲು ಸಮರ್ಥವಾಗಿದ್ದರೂ ಅಧಿಕಾರಿಯ ಸಾಮರ್ಥ್ಯ ವಿಶೇಷಕ್ಕೆ ಅನುಸಾರವಾಗಿ ಅವರವರ ಉಪಾಸನೆಗೆ ಯೋಗ್ಯವಾದ ಶಬ್ದದಿಂದ ಎಷ್ಟು ಗುಣಗಳು ತೋರುತ್ತವೆಯೋ ಅಷ್ಟೇ ಗುಣಗಳು ಅವರಿಗೆ ಧ್ಯಾನಿಸಲು ಯೋಗ್ಯವೆಂದು ವ್ಯವಸ್ಥೆಯು ಉಪಪನ್ನವಾಗಿದೆ.

## 14. ಸಂಭೃತ್ಯಧಿಕರಣ

ಈ ಅಧಿಕರಣದಲ್ಲಿ ಪೋಷಣಪ್ರಕಾಶಾದಿಗುಣಗಳು ದೇವತೆಗಳಿಂದ ಮಾತ್ರ ಉಪಾಸ್ಯವಾದವುಗಳು ಎಂದು ಹೇಳಲಾಗಿದೆ. ಇದು ಏಕಸೂತ್ರಾಧಿಕರಣ.

**ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ**

ಸಂಭೃತಿದ್ಯುವ್ಯಾಪ್ತಿಗಳೇ ವಿಷಯ. ಅವು ಎಲ್ಲ ಸಾಧಕರಿಂದಲೂ ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಎರಡು ವಿಧ ಗುಣಗಳು ಪ್ರತೀತವಾಗಿರುವುದೇ ಸಂಶಯಕ್ಕೆ ಕಾರಣ.

ಎಲ್ಲ ಸಾಧಕರಿಗೂ ಜ್ಞಾನಾನಂದಾದಿಗಳಂತೆ ತಮಗಿಂತ ಅಧಮರ ಪೋಷಣ ಮತ್ತು ಪ್ರಕಾಶವ್ಯಾಪ್ತಿ-ಗಳೂ ಸಹ ಅಪೇಕ್ಷಿತವೇ ಆಗಿರುತ್ತದೆ. ಫಲಾಪೇಕ್ಷೆಯೇ ಸಾಧನಾನುಷ್ಠಾನಕ್ಕೆ ನಿಯಾಮಕ. ಅಪೇಕ್ಷಿತವಾದ ಪೋಷಣ ಪ್ರಕಾಶಗಳು 'ಯಾದೃಶೋ ಭಾವಿತಸ್ತ್ವೀಶ ಸ್ತಾದೃಶೋ ಜೀವ ಆಭವೇತ್' ಎಂಬ ಮಾತಿನಂತೆ ಪೋಷಣಾದಿಗುಣವಿಶಿಷ್ಟ ಭಗವಂತನ ಉಪಾಸನೆಯಿಂದಲೇ ಪ್ರಾಪ್ಯವಾಗಿವೆ. ಆದ ಕಾರಣ ಪೋಷಣ ಪ್ರಕಾಶಗಳು ಸರ್ವೋಪಾಸ್ಯವಾಗಿವೆ. ಆದ್ದರಿಂದ ಎಲ್ಲರಿಗೂ ನಾಲ್ಕು ಗುಣಗಳೇ ಉಪಾಸ್ಯವಾದದ್ದು ಎಂಬುದು ಯುಕ್ತವಲ್ಲ.

ಪೋಷಣ ಪ್ರಕಾಶಾದಿಗಳು ಸರ್ವೋಪಾಸ್ಯವಲ್ಲ ಉಪಾಸನಾಕ್ಕೆ ಪ್ರಯೋಜಕವಾದದ್ದು ಯೋಗ್ಯತಾ ಹೊರತು ಫಲಾಪೇಕ್ಷೆಯಲ್ಲ. ಅಂತಹ ಯೋಗ್ಯತೆಯು ದೇವತೆಗಳಿಗೆ ಮಾತ್ರ ಇದೆ. ಮನುಷ್ಯರಿಗೆ ಇಲ್ಲ ಭಗವಂತನ ಶರೀರ ಪ್ರಕಾಶದಿಂದ ಕೂಡಿದೆ ಎಂಬ ಧ್ಯಾನದಿಂದಲೇ ತನಗೂ ಯೋಗ್ಯವಾದ ಅಲ್ಪಪ್ರಕಾಶ ಅಲ್ಪಪೋಷಣ ಪ್ರಾಪ್ತಿಯಾಗುತ್ತದೆ. ಅದಕ್ಕೆ ಮಹಾಪೋಷಣ ಮಹಾಪ್ರಕಾಶಗಳ ಧ್ಯಾನ ಬೇಕಾಗಿಲ್ಲ. ಆದ ಕಾರಣ ಪೋಷಣ ಪ್ರಕಾಶಗಳು ಸರ್ವೋಪಾಸ್ಯವಾಗದೆ ದೇವತೆಗಳಿಂದ ಮಾತ್ರ ಉಪಾಸ್ಯವಾಗಿವೆ.

## 15. ಪುರುಷವಿದ್ಯಾಧಿಕರಣ

**ಓಂ ಪುರುಷವಿದ್ಯಾಯಮಪಿಚೇತರೇಷಾಮನಾಮ್ನಾನಾತ್ ಓಂ**

ಈ ಅಧಿಕರಣದಲ್ಲಿ ಸಕಲವೇದೋಕ್ತವಾದ ಗುಣಗಳಿಂದಲೇ ಉಪಾಸನೆಯನ್ನು ಮಾಡಬೇಕು ಎಂದು ಹೇಳಲಾಗಿದೆ. ಸರ್ವವಿದ್ಯೋಕ್ತಗುಣೋಪಸಂಹಾರವೇ ವಿಷಯ. ಅದನ್ನು ಮಾಡಬೇಕೋ ಮಾಡ-ಬಾರದೋ ಎಂದು ಸಂಶಯ. ಎರಡು ರೀತಿಯ ಕ್ರಿಯೆಯು ಕಂಡಿರುವುದೇ ಸಂಶಯಕ್ಕೆ ಕಾರಣ.

ಬೇರೆ ಬೇರೆ ವಿದ್ಯೆಗಳಲ್ಲಿ ಹೇಳಿದ ಗುಣೋಪಸಂಹಾರವನ್ನು ಮಾಡಬಾರದು ತಮಗೆ ಯೋಗ್ಯವಾದ ಗುಣೋಪಸಂಹಾರಕ್ಕಾಗಿ ಸರ್ವವಿದ್ಯೋಕ್ತಗುಣಗಳ ಉಪಸಂಹಾರ ಮಾಡಬೇಕು ಎನ್ನುವದು ಯುಕ್ತ-ವಾಗುವದಿಲ್ಲ. ಅದು ಇಲ್ಲದೆಯೂ ಸ್ವಯೋಗ್ಯಗುಣೋಪಾಸನೆಯನ್ನು ಮಾಡಲು ಸಾಧ್ಯವಿದೆ. ಪುರುಷ-ಸೂಕ್ತಾದಿಗಳಲ್ಲಿ ಬಹುಗುಣಗಳೂ 'ಸತ್ಯಂಜ್ಞಾನಮನಂತಂ ಬ್ರಹ್ಮ' ಇವೇ ಮುಂತಾದ ಶ್ರುತಿಗಳಲ್ಲಿ ಅಲ್ಪ ಗುಣಗಳೂ ಪ್ರತಿಪಾದಿತವಾಗಿವೆ. ಅಲ್ಪಗುಣೋಪಾಸನೆಗೆ ಅಲ್ಪಗುಣಪ್ರತಿಪಾದಕಶ್ರುತಿಗಳೇ ಸಾಕು. ಹೆಚ್ಚಿನ ಗುಣಗಳ ಉಪಾಸಕನಿಗೆ ಬಹುಗುಣಪ್ರತಿಪಾದಕಶ್ರುತಿಗಳು ಇರಲಿ. ಆದ್ದರಿಂದ ಸರ್ವವಿದ್ಯೋಕ್ತ-ಗುಣಜ್ಞಾನದಿಂದ ಉಪಯೋಗವಿಲ್ಲ.

ಸಮಸ್ತವಿದ್ಯೆಗಳಲ್ಲಿ ಹೇಳಿದ ಗುಣಗಳ ಉಪಸಂಹಾರವನ್ನು ಮಾಡಬೇಕು. ಸರ್ವಗುಣೋಪಾಸಕರಾದ ಉತ್ತಮಾಧಿಕಾರಿಗಳೂ ಇದ್ದಾರೆ. ಆದರೆ ಒಂದೇ ವಿದ್ಯೆಯಲ್ಲಿ ಸಮಸ್ತಗುಣಗಳೂ ಪ್ರತಿಪಾದಿತವಾಗಿಲ್ಲ. ಸರ್ವವಿದ್ಯೋತ್ತಮವಾದ ಪುರುಷಸೂಕ್ತದಲ್ಲಿಯೂ ಎಲ್ಲ ಗುಣಗಳೂ ಹೇಳಲ್ಪಟ್ಟಿಲ್ಲ. ಹಾಗೆಯೇ ಮಂದಾಧಿಕಾರಿಗಳಿಂದ ಉಪಾಸ್ಯವಾದ ಗುಣಗಳೂ ಒಂದೇ ವಿದ್ಯೆಯಲ್ಲಿ ಹೇಳಲ್ಪಟ್ಟಿರಬೇಕೆಂಬ ನಿಯಮವಿಲ್ಲ. ಆದ್ದರಿಂದ ಸಾರ್ವತ್ರಿಕಗುಣೋಪಸಂಹಾರವು ಕರ್ತವ್ಯವಾದ ಪ್ರಯುಕ್ತ ಸರ್ವವಿದ್ಯೆಗಳ ಜ್ಞಾನವು ಉಪಯುಕ್ತವೇ ಆಗಿದೆ.

## 16. ವೇಧಾದ್ಯಧಿಕರಣ

ಈ ಅಧಿಕರಣದಲ್ಲಿ ಶಿಕ್ಷಿಸುವಿಕೆ ಮೊದಲಾದ ಗುಣಗಳನ್ನು ಉಪಾಸಿಸಬಾರದು ಎಂದು ಹೇಳಲಾಗಿದೆ. ಇದು ಏಕಸೂತ್ರಾಧಿಕರಣ.

**ಓಂ ವೇಧಾದ್ಯರ್ಥಭೇದಾತ್ ಓಂ**

'ಅಗ್ನೇತ್ವ ಚಂ ಯಾತುಧಾನಸ್ಯ ಭಿಂಧಿ' ಮುಂತಾದ ದುಷ್ಟವ್ಯಕ್ತಿಗಳಿಗೆ ಶಿಕ್ಷೆಯನ್ನು ಹೇಳುವ ಶ್ರುತಿಗಳಲ್ಲಿ ಶ್ರುತವಾದ ಭೇದನಾದಿಗುಣಗಳೇ ವಿಷಯ. ಆ ಗುಣಗಳು ಸರ್ವರಿಂದಲೂ ಉಪಾಸ್ಯವೋ ಅಥವಾ ಅಲ್ಲವೋ ಎಂದು ಸಂಶಯ. ಉಪಾಸ್ಯವಾದ ಹಾಗೆಯೇ ಅನುಪಾಸ್ಯವಾದ ಗುಣಗಳೂ ಕಂಡಿವೆ. ಇದೇ ಸಂಶಯಕ್ಕೆ ಕಾರಣ.

ದುಷ್ಟನಿಗ್ರಹವೂ ಶ್ರುತಿ ಸ್ಮೃತಿ ವಿಹಿತವೇ ಆಗಿವೆ. ಆದ್ದರಿಂದ ಭೇದನಾದಿಗುಣಗಳು ಎಲ್ಲರಿಂದಲೂ ಉಪಾಸ್ಯವೇ ಆಗಿದೆ.

ಭೇದನಾದಿ ಗುಣಗಳು ಸರ್ವರಿಂದಲೂ ಉಪಾಸ್ಯವಲ್ಲ ಭೇದನಾದಿಗುಣಗಳ ಉಪಾಸನೆಯಿಂದ ದೊರೆಯುವ ಹಿಂಸಾರೂಪಫಲವು ಯತ್ಯಾದಿಗಳಿಗೆ ಯೋಗ್ಯವಲ್ಲ. ಅದು ಕ್ಷತ್ರಿಯಾದಿಗಳಿಗೆ ಯೋಗ್ಯ-ವಾಗಿದೆ. ಅಯೋಗ್ಯವಾದ ಗುಣದ ಉಪಾಸನೆಯಿಂದ ಅನರ್ಥವೇ ಉಂಟಾಗುತ್ತದೆ. ಆದ್ದರಿಂದ ಅಂತಹ ಗುಣದ ಉಪಾಸನೆಯಿಂದ ಅನರ್ಥವೇ ಉಂಟಾಗುತ್ತದೆ. ಆದ್ದರಿಂದ ಅಂತಹ ಗುಣದ ಉಪಾಸನೆಯಲ್ಲಿ ಅಪೇಕ್ಷೆಯೇ ಯುಕ್ತವಲ್ಲ. ಈ ರೀತಿ ಫಲಭೇದವಿರುವದರಿಂದ ಭೇದನಾದಿಗುಣಗಳು ಯತಿಗಳೇ ಮುಂತಾದವರಿಂದ ಉಪಾಸ್ಯವಲ್ಲ.

## 17. ಹಾನ್ಯಧಿಕರಣ

ಈ ಅಧಿಕರಣದಲ್ಲಿ ಮೋಕ್ಷದಲ್ಲಿಯೂ ಉಪಾಸನೆ ಮಾಡುತ್ತಾರೆ ಆದರೆ ಅದು ಐಚ್ಛಿಕ. ಇದು ಎರಡು ಸೂತ್ರಗಳನ್ನೊಳಗೊಂಡ ಅಧಿಕರಣ.

**ಓಂ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ಓಂ**
**ಓಂ ಸಾಂಪರಾಯೇ ತರ್ತವ್ಯಾಭಾವಾತ್ ತಥಾ ಹ್ಯನ್ಯೇ ಓಂ**

ಪ್ರಕೃತವಾದ ಉಪಾಸನೆಯೇ ವಿಷಯ. ಮುಕ್ತರು ಉಪಾಸನೆಯನ್ನು ಮಾಡುತ್ತಾರೋ ಅಥವಾ ಇಲ್ಲವೋ ಎಂದು ಸಂಶಯ. ಉಪಾಸನೆಯ ಫಲವನ್ನು ಮುಕ್ತರು ಈಗಾಗಲೇ ಹೊಂದಿರುವರು ಹಾಗೂ ಜಕ್ಷನ್ ಕ್ರೀಡನ್ ರಮಮಾಣಃ ಎಂದು ಇತರ ಕ್ರಿಯೆಗಳು ಶ್ರುತವಾಗುತ್ತಿವೆ. ಇದೇ ಸಂಶಯಕ್ಕೆ ಕಾರಣ.

ಮೋಕ್ಷದಲ್ಲಿಯೂ ಉಪಾಸನೆಯು ವಿಹಿತವಾಗಿದೆ. ಎಂದಾಗ ಮುಕ್ತನ ಉಪಾಸನೆಗೆ ಫಲವು ದೊರಕಬೇಕಾಗುತ್ತದೆ. ಮುಕ್ತಿಯಲ್ಲಿ ಉಪಾಸನಾಪೂರ್ವದಲ್ಲಿ ಆ ಫಲವಿಲ್ಲದಿದ್ದ ಪ್ರಯುಕ್ತ ಮುಕ್ತನಿಗೆ ಅಪೂರ್ಣತೆ ಉಂಟಾಗುತ್ತದೆ. ವಿಹಿತವಾದ ಉಪಾಸನೆಯನ್ನು ಮುಕ್ತನೂ ಮಾಡುವದರಿಂದ ಸಂಸಾರಿ-ಯಂತೆಯೇ ಅವನು ವಿಧಿಬದ್ಧನೆಂದಾಗುತ್ತದೆ. ಇದರಿಂದ ಮುಕ್ತನಿಗೆ ಸಂಸಾರಿಸಾಮ್ಯವು ಬರುತ್ತದೆ. ಉಪಾಸನೆಯು ಮುಕ್ತನಿಗೆ ವಿಹಿತವಲ್ಲವೆಂದಾಗ ಉಪಾಸನೆಯು ಕರ್ತವ್ಯವಲ್ಲವಾದ್ದರಿಂದ ಮುಕ್ತಿಯಲ್ಲಿ ಉಪಾಸನೆಯನ್ನು ಮಾಡಬಾರದು ಎಂದಾಗುತ್ತದೆ. ಆದಕಾರಣ ಮುಕ್ತನು ಉಪಾಸನೆಯನ್ನು ಮಾಡುವದಿಲ್ಲ.

ಮೋಕ್ಷದಲ್ಲಿಯೂ ಭಗವಂತನ ಉಪಾಸನೆಯು ಇದ್ದೇ ಇದೆ. ಮೋಕ್ಷದಲ್ಲಿ ಉಪಾಸನೆಯು ವಿಧಿಯಿಂದ ವಿಹಿತವಾಗಿಲ್ಲ. ವಿಧಿ ಇಲ್ಲದಿದ್ದರೂ ಸ್ವೇಚ್ಛೆಯಿಂದಲೇ ಮಾಡುತ್ತಾನೆ. ಅದಕ್ಕೆ ಕಾರಣ ಅವನ ಸ್ವಭಾವ ವಿಶೇಷ. ಎಲ್ಲ ಉಪಾಸನಾವಿಧಿಗಳೂ ಮೋಕ್ಷಸಿದ್ಧಿಗಾಗಿ ಪ್ರವೃತ್ತವಾಗಿರುವದು. ಆದ್ದರಿಂದ ಅವುಗಳು ಮುಕ್ತನನ್ನು ಕುರಿತು ವಿಹಿತವಲ್ಲ. ಮುಕ್ತಿಯಲ್ಲಿನ ಉಪಾಸನೆಯು ಫಲರೂಪವಾಗಿದೆ. ಅದು ಸಾಧನರೂಪವಲ್ಲ. ವಿಧಿವಿಹಿತವಾದ ಬ್ರಹ್ಮಯಜ್ಞದ ಅನಂತರವೂ ಸ್ವೇಚ್ಛೆಯಿಂದ ದರ್ಭೆಯನ್ನು ಕೈಯಲ್ಲಿ ಹಿಡಿದು ಮಂತ್ರ ಹಾಗೂ ಸಾಮಗಳನ್ನು ಬ್ರಾಹ್ಮಣರು ಪಠಿಸುವಂತೆ ಮುಕ್ತನೂ ಸ್ವೇಚ್ಛೆಯಿಂದಲೇ ಉಪಾಸನೆಯನ್ನು ಮಾಡುವನು.

## 18. ಛಂದಾಧಿಕರಣ

ಈ ಅಧಿಕರಣದಲ್ಲಿ ಮುಕ್ತರು ಮೋಕ್ಷದಲ್ಲಿಯೂ ಸ್ವೇಚ್ಛೆಯಿಂದ ಕರ್ಮಮಾಡುತ್ತಾರೆ. ಈ ಅಧಿಕರಣದಲ್ಲಿ ಮೂರು ಸೂತ್ರಗಳಿವೆ.

**ಓಂ ಛಂದತ ಉಭಯಾವಿರೋಧಾತ್ ಓಂ**

**ಓಂ ಗತೇರರ್ಥವತ್ವಮುಭಯಥಾನ್ಯಥಾ ಹಿ ವಿರೋಧಃ ಓಂ**

**ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ**

ಮುಕ್ತರೇ ವಿಷಯ. ಅವರು ಉಪಾಸನಾದಂತೆ ನಿಯತವಾಗಿ ಕರ್ಮವನ್ನು ಮಾಡುವರೋ ಅಥವಾ ಇಲ್ಲವೋ ಎಂದು ಸಂಶಯ. ಕರ್ಮವನ್ನು ಮಾಡಿದರೂ ಮಾಡದಿದ್ದರೂ ವಿರೋಧವಿಲ್ಲ ಇದೇ ಸಂಶಯಕ್ಕೆ ಕಾರಣ.

ಮುಕ್ತರಿಗೆ ಕರ್ಮವನ್ನು ಮಾಡುವ ಶಕ್ತಿಯೂ ಇದೆ. ಮತ್ತು ಕರ್ಮವು ಭಗವತ್ಪೂಜಾರೂಪವಾಗಿದೆ. ಹೀಗೆ ಪ್ರಯೋಜನವಿರುವದರಿಂದ ಮುಕ್ತರೂ ನಿಯತವಾಗಿ ಕರ್ಮವನ್ನು ಮಾಡಬೇಕು. ಇಲ್ಲದಿದ್ದರೆ ಉಪಾಸನೆಯೂ ಅನಿಯತವಾಗಬೇಕಾದೀತು. ಈ ರೀತಿ ಮುಕ್ತರಿಗೆ ಕರ್ಮೋಪಾಸನಾಗಳಲ್ಲಿ ಸಾಮ್ಯ-ವಿರುವದರಿಂದ ಸಂಸಾರದಲ್ಲಿಯೂ ಕರ್ಮಕ್ಕಿಂತ ಅತಿಶಯವಾಗಿ ಉಪಾಸನೆ ಕಾರ್ಯವಲ್ಲ.

ಮುಕ್ತರು ಕರ್ಮಾನುಷ್ಠಾನದ ಶಕ್ತಿ ಇದ್ದರೂ ಸ್ವೇಚ್ಛಾನುಸಾರವಾಗಿ ಕೆಲವೊಮ್ಮೆ ಕರ್ಮಮಾಡುವರು ಕೆಲವೊಮ್ಮೆ ಮಾಡುವದಿಲ್ಲ ಏಕೆಂದರೆ ಅವರಿಗೆ ವಿಧಿಯ ಬಂಧನವಿಲ್ಲ. ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವಿಲ್ಲ. ಆದ್ದರಿಂದ ಮುಕ್ತನಿಗೆ ಕರ್ಮದ ನಿಯಮವಿಲ್ಲದಿರುವದರಿಂದ ಸಂಸಾರದಲ್ಲಿ ಕರ್ಮಕ್ಕಿಂತ ಉಪಾಸನೆಯನ್ನು ಅಧಿಕವಾಗಿ ಆಚರಿಸಬೇಕು.

## 19. ಅನಿಯಮಾಧಿಕರಣ

ಈ ಅಧಿಕರಣದಲ್ಲಿ ಎಲ್ಲ ಜ್ಞಾನಿಗಳಿಗೂ ಮೋಕ್ಷವು ಆಗಿಯೇ ಆಗುತ್ತದೆ ಎಂದು ಹೇಳಲಾಗಿದೆ.

**ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಮ್ ಓಂ**

ಮೋಕ್ಷವೇ ಈ ಅಧಿಕರಣದ ವಿಷಯ. ಎಲ್ಲ ಬ್ರಹ್ಮಜ್ಞಾನಿಗಳಿಗೂ ಮೋಕ್ಷವಿದೆಯೋ ಅಥವಾ ಕೆಲವರಿಗಿದೆ ಕೆಲವರಿಗಿಲ್ಲ ಎಂದು ವ್ಯವಸ್ಥೆಯೋ ಎಂದು ಸಂಶಯ. ಉಪಾಸನೆಯಲ್ಲಿ ನಿಯಮವು ಕರ್ಮದಲ್ಲಿ ಅನಿಯಮವು ಕಂಡಿರುವುದು ಸಂಶಯಕ್ಕೆ ಕಾರಣ.

ಎಲ್ಲ ಬ್ರಹಾಪರೋಕ್ಷಜ್ಞಾನಿಗಳಿಗೂ ಮೋಕ್ಷವಿಲ್ಲ. ಕೆಲವು ಬ್ರಹ್ಮಜ್ಞಾನಿಗಳಿಗೆ ತಮಗಿಂತ ಉತ್ತಮರ ದ್ರೋಹ ಅಥವಾ ಶಾಪ ಇವುಗಳಿಂದ ಮೋಕ್ಷದ ಅಯೋಗ್ಯತೆಯು ಪ್ರಾಪ್ತವಾಗುವುದು ಯಾವ ರೀತಿ ಉಪಾಸಕರಲ್ಲಿ ಯೋಗ್ಯರಿಗೆ ಸರ್ವಗುಣೋಪಸಂಹಾರವು ಅಯೋಗ್ಯರಿಗಿಲ್ಲ ಅದರಂತೆ ಮೋಕ್ಷವು ಕೆಲವರಿಗಿದೆ ಕೆಲವರಿಗಿಲ್ಲ.

ಎಲ್ಲ ಬ್ರಹ್ಮಜ್ಞಾನಿಗಳಿಗೂ ಮೋಕ್ಷವಿದೆ. 'ಸರ್ವೈರ್ಗುಣೈರ್ಬ್ರಹ್ಮಣೈವ ಹ್ಯುಪಾಸ್ಯೋ ನಾನ್ಯೈಃ' ಎಂದು ವಚನವಿರುವದರಿಂದ ಉಪಾಸನಾದಲ್ಲಿ ಬ್ರಹ್ಮಾದಿಗಳಿಗೆ ಸರ್ವಗುಣೋಪಸಂಹಾರವಿದ್ದರೂ ಇತರರಿಗೆ ಸರ್ವಗುಣೋಪಸಂಹಾರವಿಲ್ಲ. ಇತರರಿಗೆ ಇಲ್ಲವೆನ್ನುವ ನಿಷೇಧಕ ವಚನವಿದೆ. ಆದರೆ ಬ್ರಹ್ಮಜ್ಞಾನಿಗಳಲ್ಲಿ ಯಾರಿಗೂ ಮುಕ್ತಿ ನಿಷೇಧಕ ವಚನವಿಲ್ಲ. ಅದಲ್ಲದೆ ಬ್ರಹ್ಮಜ್ಞಾನಿಗೆ ಸಂಸಾರವಿಲ್ಲವೆನ್ನುವ ವಚನವೇ ಇದೆ. ಬ್ರಹ್ಮಜ್ಞಾನಹೊಂದಿರುವುದರಿಂದಲೇ ಜ್ಞಾನಿಗಳಿಗೆ ಮೋಕ್ಷವು ನಿಯತ ಎಂದು ಅನುಮಾನವನ್ನು ಪ್ರಯೋಗಿಸಬಹುದು. ಅನುಮಾನಕ್ಕೆ ಪೋಷಕವಾಗಿ ಶ್ರುತಿಯು ಇದೆ. ಈ ಎಲ್ಲ ಕಾರಣದಿಂದ ಬ್ರಹ್ಮಜ್ಞಾನಿಗಳಲ್ಲಿ ಮೋಕ್ಷಕ್ಕೆ ಅಯೋಗ್ಯರಾದವರೇ ಇಲ್ಲ ಎಲ್ಲರಿಗೂ ಮೋಕ್ಷ ನಿಶ್ಚಿತ ಆದ್ದರಿಂದ ಉಪಾಸನೆಯನ್ನು ಮಾಡಬೇಕು.

## 20. ಯಾವದಧಿಕರಣ

ಈ ಅಧಿಕರಣದಲ್ಲಿ ಮೋಕ್ಷದಲ್ಲಿಯೂ ತಾರತಮ್ಯವಿದೆ ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ಎರಡು ಸೂತ್ರಗಳಿವೆ.

**ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ**
**ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯ ತದ್ಭಾವಾಭ್ಯಾಮೌಪಸದವತ್ ತದುಕ್ತಮ್ ಓಂ**

ಸಾಧಕರು ಈ ಅಧಿಕರಣಕ್ಕೆ ವಿಷಯ. ಅವರ ಉಪಾಸನಾಧಿಕಾರನಿಯಮವುಳ್ಳವರೋ ಅಥವಾ ಅಲ್ಲವೋ ಭೋಜನಾದಿಕ್ರಿಯೆಯಲ್ಲಿ ನಿಯಮವು ಕಾಣದಿರುವುದು ಸಂಶಯಕ್ಕೆ ಕಾರಣ.

ಸಾಧಕರಿಗೆ ಉಪಾಸನಾದಲ್ಲಿ ಅಧಿಕಾರನಿಯಮವಿಲ್ಲ ಮುಕ್ತಿಯಲ್ಲಿ ಆನಂದತಾರತಮ್ಯಕ್ಕೆ ಕಾರಣ ಉಪಾಸನೆಯಲ್ಲಿ ಪ್ರಯತ್ನ ತಾರತಮ್ಯ ಹೊರತಾಗಿ ಅಧಿಕಾರನಿಯಮವಲ್ಲ. ವಾಸ್ತವಿಕವಾಗಿ ಮುಕ್ತಿಯಲ್ಲಿ ಆನಂದತಾರತಮ್ಯವೇ ಇಲ್ಲ. ಆನಂದತಾರತಮ್ಯವನ್ನು ಅಲ್ಲಿಯೂ ಒಪ್ಪಿದರೆ ಲೋಕದಂತೆ ದ್ವೇಷೇ-ರ್ಷ್ಯಾದಿಗಳು ಉಂಟಾಗಬೇಕಾದೀತು. ಆದ್ದರಿಂದ ಉಪಾಸನಾಧಿಕಾರ ನಿಯಮವು ಅಪ್ರಯೋಜಕ.

ಮುಕ್ತಿಯಲ್ಲಿ ಆನಂದತಾರತಮ್ಯವಿದೆ. ಅದು ಉಪಾಸನಾಧಿಕಾರನಿಯಮವನ್ನು ಅನುಸರಿಸಿ ಇದೆ. 'ಮನುಷ್ಯೇಭ್ಯೋ ಗಂಧರ್ವಾಣಾಂ ಗಂಧರ್ವೇಭ್ಯಃ ಋಷೀಣಾಮ್' ಮುಂತಾದ ವಾಕ್ಯಗಳು ಮುಕ್ತಿಯಲ್ಲಿ ಆನಂದತಾರತಮ್ಯವಿದೆ ಎಂಬ ವಿಷಯದಲ್ಲಿ ಪ್ರಮಾಣವಾಗಿದೆ. ಮುಕ್ತಿಯಲ್ಲಿ ಆನಂದತಾರತಮ್ಯಕ್ಕೆ ಉಪಾಸನಾದಿಪ್ರಯತ್ನವು ಕಾರಣವಲ್ಲ. ಉಪಾಸನಾದಿಪ್ರಯತ್ನವೂ ಸಹ ಉಪಾಸನಾಧಿಕಾರನಿಯಮವನ್ನು ಅನುಸರಿಸಿ ಇದೆ.

## 21. ಇಯದಾಮನನಾಧಿಕರಣ

ಈ ಅಧಿಕರಣದಲ್ಲಿ ಉಪಾಸಕರಿಗೆ ಪ್ರಾಣನೇ ಅವಧಿ ಎಂದು ಇಲ್ಲಿ ಹೇಳಲಾಗಿದೆ. ಇಲ್ಲಿ ಮೂರು ಸೂತ್ರಗಳು ಇವೆ.

**ಓಂ ಇಯದಾಮನನಾತ್ ಓಂ**
**ಓಂ ಅಂತರಾ ಭೂತಗ್ರಾಮವದಿತಿ ಚೇತ್ ತದುಕ್ತಮ್ ಓಂ**
**ಓಂ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್ ಓಂ**

ಉಪಾಸನಾಧಿಕಾರಿಗಳೇ ಈ ಅಧಿಕರಣದ ವಿಷಯ. ಅವರು ಪ್ರಾಣಪರ್ಯಂತವಾಗಿ ಇರುವರೋ ಅಥವಾ ಅಲ್ಲವೋ ಎಂದು ಸಂಶಯ. ಅನುಕ್ತಿಯೇ ಸಂಶಯಕ್ಕೆ ಕಾರಣ.

ಪ್ರಾಣನ ಪರ್ಯಂತವಾಗಿ ಮಾತ್ರ ಅಧಿಕಾರಿಗಳು ಇರುವದಿಲ್ಲ. ಲೋಕದಲ್ಲಿ ಒಬ್ಬನಿಗಿಂತಲೂ ಮತ್ತೊಬ್ಬನು ಉತ್ತಮನಾಗಿರುವುದು ಕಂಡಿದೆ. ಪ್ರಾಣನಿಗಿಂತ ಉತ್ತಮನಿಲ್ಲವೆಂದರೆ ಲೋಕದೃಷ್ಟಿಯ ವಿರೋಧವು ಬರುತ್ತದೆ. ನಾಮವಾಗಾದಿಗಳಂತೆ ಮುಖ್ಯಪ್ರಾಣನೂ ಅಧಿಕಾರಿಯಾದ್ದರಿಂದ ಅವನಿಗಿಂತ ಉತ್ತಮರಾದ ಅಧಿಕಾರಿಗಳಿದ್ದಾರೆ ಎಂದು ಅನುಮಾನವನ್ನು ಮಾಡಬಹುದು ಹೀಗೆ ಪ್ರಾಣನಿಗಿಂತ ಉತ್ತಮರಾದ ಉಪಾಸಕರೂ ಇರುವದರಿಂದ ಪ್ರಾಣನೇ ಸರ್ವಗುಣೋಪಾಸನೆಗೆ ಯೋಗ್ಯನೆನ್ನುವದು ಸಮಂಜಸವಲ್ಲ.

ನಾಮಾದಿಗಳಂತೆ ಪ್ರಾಣನಿಗಿಂತ ಉತ್ತಮನಾದ ಉಪಾಸಕನಿಲ್ಲ. ಪ್ರಾಣನ ಪರ್ಯಂತವಾಗಿ ಉಪಾಸಕರೂ ಇರುವದರಿಂದ ಪ್ರಾಣನೇ ಸರ್ವಗುಣೋಪಾಸನೆಗೆ ಯೋಗ್ಯನೆನ್ನುವದು ಸಮಂಜಸವಲ್ಲ.

ನಾಮಾದಿಗಳಂತೆ ಪ್ರಾಣನಿಗಿಂತ ಉತ್ತಮನಾದ ಉಪಾಸಕನಿಲ್ಲ. ಪ್ರಾಣನ ಪರ್ಯಂತವಾಗಿ ಉಪಾಸಕರು ಅವನಿಂದ ಉತ್ತಮರಿಲ್ಲವೆಂದು ಶ್ರುತಿಯು ಹೇಳುತ್ತದೆ. ಆದ್ದರಿಂದ ಅನುಮಾನಕ್ಕೆ ಶ್ರುತಿವಿರೋಧವು ಬರುತ್ತದೆ. ಆದ್ದರಿಂದ ಪ್ರಾಣನೇ ಸರ್ವಗುಣೋಪಾಸನೆಗೆ ಯೋಗ್ಯನು.

## 22. ವ್ಯತಿಹಾರಾಧಿಕರಣ

ಈ ಅಧಿಕರಣದಲ್ಲಿ ಪರಮಾತ್ಮನು ಪ್ರಾಣಾಧಿಕನಾಗಿದ್ದಾನೆ ಎಂದು ಹೇಳಲಾಗಿದೆ.

**ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ**

ಪ್ರಕೃತನಾದ ವಿಷ್ಣುವೇ ಇಲ್ಲಿ ವಿಷಯ. ಅವನು ಪ್ರಾಣನಿಗಿಂತ ಉತ್ತಮನೋ ಅಥವಾ ಅಲ್ಲವೋ ಎಂದು ಸಂಶಯ. ವಿಪ್ರತಿಪತ್ತಿಯೇ ಸಂಶಯಕ್ಕೆ ಕಾರಣ.

ವಿಷ್ಣುವು ಪ್ರಾಣನಿಂದ ಉತ್ತಮನಲ್ಲ. ಛಂದೋಗಶ್ರುತಿಯು ಪ್ರಾಣನನ್ನೇ ಉತ್ತಮನೆಂದು ಹೇಳುತ್ತದೆ. ಆದರೆ ಅವನಿಂದಲೂ ಮತ್ತೊಬ್ಬನಿಗೆ ಉತ್ತಮತ್ವವನ್ನು ಹೇಳಿಲ್ಲ. 'ಏಷ ತು ವಾತಿವದತಿ ಯಃ ಸತ್ಯೇನಾತಿ-ವದತಿ' ಎಂದು ಸತ್ಯಪದೋಕ್ತನಾದ ವಿಷ್ಣುವಿಗೆ ಉತ್ತಮತ್ವವನ್ನು ಹೇಳಿದೆ ಎನ್ನಲು ಸಾಧ್ಯವಿಲ್ಲ. 'ಅಸ್ತಿ ಭಗವಃ ಪ್ರಾಣಾದ್ಭೂಯಃ' ಎಂದು ಪ್ರಶ್ನಪ್ರತಿವಚನಗಳು ಇಲ್ಲದಿರುವದರಿಂದ ಪ್ರಕರಣಭೇದವನ್ನು ಕಲ್ಪಿಸಲು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಸತ್ಯಪದದಿಂದ ವಾಚ್ಯನು ಪ್ರಾಣನೇ ಆಗಿದ್ದಾನೆ. ಹೀಗೆ ವಿಷ್ಣುವು ಪ್ರಾಣನಿಂದ ಉತ್ತಮನಲ್ಲವಾದ್ದರಿಂದ ವಿಷ್ಣುವಿನ ಉಪಾಸನೆಯನ್ನು ಮಾಡಬಾರದು.

ವಿಷ್ಣುವು ಸರ್ವೋತ್ತಮನಲ್ಲವೆನ್ನುವುದು ಯುಕ್ತವಲ್ಲ. 'ಏಷ ತು ವಾ ಅತಿವದತಿ ಯಃ ಸತ್ಯೇನಾತಿ-ವದತಿ' ಎಂಬ ಶ್ರುತಿಯಲ್ಲಿ ಸತ್ಯಪದವಾಚ್ಯನು ವಿಷ್ಣುವೇ ಹೊರತು ಪ್ರಾಣನಲ್ಲ. ಪ್ರಶ್ನಾದಿಗಳನ್ನು ಹೇಳದಿದ್ದರೂ ಅದರ ಅಧ್ಯಾಹಾರವನ್ನು ಮಾಡಬೇಕು. 'ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜ್ಞಾನನ್ನತಿವಾದೀ ಭವತಿ' ಎಂಬ ಶ್ರುತಿಯಲ್ಲಿ ಪ್ರಾಣನನ್ನು ಹೇಳುವವನು ಶ್ರೇಷ್ಠವಸ್ತುವನ್ನು ಹೇಳುವವ-ನಾದ್ದರಿಂದ ಅವನನ್ನು ಅತಿವಾದೀ ಎನ್ನಲಾಗಿದೆ. 'ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ' ಎಂಬ ಶ್ರುತಿಯಲ್ಲಿ ಸತ್ಯನಾಮಕವಿಷ್ಣುವನ್ನು ಶ್ರೇಷ್ಠನೆಂದು ಹೇಳುವವನಿಗೆ ಅತಿವಾದಿತ್ವವನ್ನು ಹೇಳುವಾಗ 'ತು' ಎಂದು ವಿಶೇಷಣವನ್ನು ನೀಡಲಾಗಿದೆ. ಪ್ರಾಣನಿಗಿಂತ ಸತ್ಯನು ಉತ್ತಮನೆಂದು ತಿಳಿಸಲು ಈ 'ತು' ಶಬ್ದವನ್ನು ಪ್ರಯೋಗಿಸಲಾಗಿದೆ. ಹೀಗೆ ಪ್ರಾಣಸತ್ಯಗಳು ಭಿನ್ನವೆಂದು ತಿಳಿಯುತ್ತದೆ. ಅಧಿಕ ಎಂದು ಅರ್ಥವನ್ನು ನೀಡುವ ತು ಶಬ್ದವಿರುವ ಪ್ರಯುಕ್ತ ಪ್ರಶ್ನೆ ಪ್ರತಿವಚನಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆದ್ದರಿಂದ ಸತ್ಯಪದೋಕ್ತನಾದ ವಿಷ್ಣುವೇ ಸರ್ವೋತ್ತಮ.

## 23. ಸತ್ಯಾದ್ಯಧಿಕರಣ

ಈ ಅಧಿಕರಣದಲ್ಲಿ ಸತ್ಯಾದಿಗಳು ಪರಮಾತ್ಮನ ಸ್ವರೂಪಗಳೇ ಆಗಿವೆ ಎಂದು ಹೇಳಲಾಗಿದೆ.

**ಓಂ ಸೈವ ಹಿ ಸತ್ಯಾದಯಃ ಓಂ**

ಪ್ರಾಣನೇ ವಿಷಯ. ಪ್ರಾಣನಿಗಿಂತಲೂ ಸತ್ಯಪದದಿಂದ ವಾಚ್ಯನಾದ ವಿಷ್ಣುವೇ ಉತ್ತಮನೋ ಅಥವಾ ಬೇರೆಯವರಿರುವರೋ ಎಂದು ಸಂಶಯ. ವಿಷ್ಣುವು ಉತ್ತಮ. ಅವನಿಗಿಂತ ಇತರರೂ ಉತ್ತಮರು ಇದ್ದಾರೆ ಎಂದಾಗ ವಿರೋಧವಿಲ್ಲ ಇದೇ ಸಂಶಯಕ್ಕೆ ಕಾರಣ.

ಸತ್ಯ,ವಿಜ್ಞಾನ,ಮತಿ,ಶ್ರದ್ಧಾ,ನಿಷ್ಠಾ,ಕೃತಿ,ಭೂಮಾ,ಅಹಂಕಾರ,ಆತ್ಮ ಇವುಗಳಿಗೆ ಅಭೇದವನ್ನು ಹೇಳಿಲ್ಲ. ಹಾಗಿದ್ದರೂ ಅಭೇದವಿಟ್ಟುಕೊಳ್ಳುವುದಾದರೆ ಪ್ರಾಣನಿಗೂ ಅಭೇದ ಏಕೆ ಇಲ್ಲ. ಆದ್ದರಿಂದ ಭೇದವೇ ಇದೆ. ಕಾರಣ ವಿಜ್ಞಾನಾದಿಪದದಿಂದ ಹೇಳಲ್ಪಟ್ಟ ವಿಜ್ಞಾನಾದಿಗಳಿಗೆ ಸತ್ಯಪದದಿಂದ ವಾಚ್ಯನಾದ ವಿಷ್ಣು-ವಿನಿಂದ ಉತ್ತಮತ್ವವು ಪ್ರಾಪ್ತವಾಗುತ್ತದೆ. ಆದ್ದರಿಂದ ಪ್ರಾಣನಿಗೆ ವಿಷ್ಣು ಹೊರತಾಗಿ ಸರ್ವೋತ್ತಮತ್ವವೂ ವಿಷ್ಣುವಿಗೆ ನಿರುಪಚರಿತಸರ್ವೋತ್ತಮತ್ವವೂ ಯುಕ್ತವಲ್ಲ ಎಂದು ಪೂರ್ವಪಕ್ಷ.

ಪ್ರಾಣನಿಗಿಂತ ಉತ್ತಮರು ಅನೇಕರು ಇದ್ದಾರೆ ಎನ್ನುವುದು ಯುಕ್ತವಲ್ಲ. ಸತ್ಯದಿಂದ ಪ್ರಾರಂಭಿಸಿ ಅಹಂಕಾರದವರೆಗೂ ಹೇಳಲ್ಪಟ್ಟವರು ಬೇರೆ ಅಲ್ಲ. ಪರಮಾತ್ಮನೇ ಆ ಆ ಗುಣಗಳಿಂದ ಹೇಳಲ್ಪಟ್ಟಿದ್ದಾನೆ. ಸತ್ಯಂ ಪೂರ್ಣಂ ವಿಜ್ಞಾನಂ ಪೂರ್ಣಂ, ಕೃತಿಃ ಪೂರ್ಣಾ ಎಂದು ಶ್ರುತಿಯೇ ಇದನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತಿದೆ. ಹೀಗೆ ಪರಮಾತ್ಮನ ಗುಣಗಳನ್ನು ಹೇಳಿರುವದರಿಂದ ಅವುಗಳಿಂದ ಅಭೇದವು ಸಿದ್ಧವಾಗುತ್ತದೆ. 'ಏವಂ ಪಶ್ಯನ್ನೇವಂ ವಿಜಾನನ್ನಾತ್ಮರತಿಃ' ಇತ್ಯಾದಿ ವಾಕ್ಯಗಳಲ್ಲಿ ಆತ್ಮಜ್ಞಾನದಿಂದ ಮೋಕ್ಷವು ಹೇಳಲ್ಪಟ್ಟಿದೆ. ಮೋಕ್ಷವು ಪರಮಾತ್ಮನ ಜ್ಞಾನದಿಂದಲೇ ದೊರಕುವುದು ಆದ್ದರಿಂದಲೂ ಅಭೇದವು ಸಿದ್ಧವಾಗುತ್ತದೆ. ಹೀಗೆ ಸತ್ಯಾದಿಗಳೆಲ್ಲವೂ ಭಗವಂತನ ಸ್ವರೂಪವೇ ಆದ್ದರಿಂದ ಪ್ರಾಣನಿಗಿಂತ ಪರಮಾತ್ಮನು ಉತ್ತಮನೇ ಆಗಿದ್ದಾನೆ.

## 24. ಅಥ ಕಾಮಾಧಿಕರಣ

ಈ ಅಧಿಕರಣದಲ್ಲಿ ನಿತ್ಯಮುಕ್ತಳಾದ ರಮಾದೇವಿಯೂ ಭಕ್ತಿವಿಶೇಷದಿಂದ ಉಪಾಸನೆಮಾಡುತ್ತಾನೇ ಇರುತ್ತಾಳೆ ಎಂದು ಹೇಳಲಾಗಿದೆ.

**ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ**
**ಓಂ ಆದರಾದಲೋಪಃ ಓಂ**
**ಓಂ ಉಪಸ್ಥಿತೇಸ್ತದ್ವಚನಾತ್ ಓಂ**

ಪ್ರಾಣಪರಮಾತ್ಮರ ಪ್ರಸಂಗದಿಂದ ಪ್ರಸಕ್ತಳಾದ ಲಕ್ಷ್ಮೀದೇವಿಯು ವಿಷಯ. ಉಪಾಸನಾಧಿಕಾರ ಹೊಂದಿದ್ದಾಳೋ ಇಲ್ಲವೋ ಎಂದು ಸಂದೇಹ. ಅನಧಿಕಾರಿ ಹಾಗೂ ಅಧಿಕಾರಿಗಳೆಂದು ಎರಡು ವಿಧ ಚೇತನರೂ ಕಂಡಿದ್ದಾರೆ. ಇದೇ ಸಂಶಯಕ್ಕೆ ಕಾರಣ.

ಲಕ್ಷ್ಮೀಯು ಉಪಾಸನಾಧಿಕಾರವನ್ನು ಹೊಂದಿದ್ದಾಳೆ. ಸೀತಾರುಕ್ಮಿಣ್ಯಾದಿರೂಪಗಳನ್ನು ತಾಳಿದ ಅವಳಲ್ಲಿಯೂ ಜನ್ಮಮರಣಾದಿಗಳು ಕಂಡಿದೆ. ಆದ್ದರಿಂದ ಅವಳೂ ಸಂಸಾರಿಯಾಗಿದ್ದಾಳೆ. ನಾಮಾದಿ ಉಪಾಸನಾಧಿಕಾರಿಗಳಲ್ಲಿ ಅವಳ ಹೆಸರನ್ನು ಹೇಳದಿದ್ದರೂ ಅಧ್ಯಾಹಾರ ಮಾಡಬೇಕು. ಲಕ್ಷ್ಮೀಯಾದರೂ ಪ್ರಾಣನಿಗಿಂತ ಉತ್ತಮಳೇ ಆಗಿದ್ದಾಳೆ. ಆದ್ದರಿಂದ ಪ್ರಾಣನಿಗಿಂತ ಉತ್ತಮರಿಲ್ಲ ಎನ್ನುವುದು ಯುಕ್ತವಲ್ಲ. ಲಕ್ಷ್ಮೀದೇವಿಯು ಸಂಸಾರಬಂಧನಕ್ಕೆ ಒಳಪಟ್ಟವಳಲ್ಲ. ಆದ್ದರಿಂದ ಅವಳು ಉಪಾಸನಾಧಿಕಾರಿಯಲ್ಲ. ಸೀತಾರುಕ್ಮಿಣೀ ಮುಂತಾದವರು ಅವಳ ಅವತಾರಗಳಷ್ಟೇ ಹೊರತಾಗಿ ಜನ್ಮಗಳಲ್ಲ. ಭೂಮಿಯಲ್ಲಿ ಅವತರಿಸಿದಾಗಲೂ ಮೂಲರೂಪದಿಂದ ಭಗವಂತನ ಸಮೀಪದಲ್ಲಿಯೇ ಇರುತ್ತಾಳೆ. ಅವಳ ಅವತಾರವು ಕರ್ಮನಿಮಿತ್ತವಲ್ಲ. ಈಶ್ವರೇಚ್ಛೇಗೆ ಅನುಗುಣವಾಗಿ ಸ್ವೇಚ್ಛೆಯಿಂದ ಸ್ವೀಕರಿಸಿರುವ ರೂಪಗಳು. ಏಕೆಂದರೆ ಲಕ್ಷ್ಮೀಯನ್ನು ಸರ್ವಗತಳೆಂದು ಪ್ರತಿಪಾದಿಸುವ ಶ್ರುತಿಗಳಿವೆ. ಲಕ್ಷ್ಮಿಯು ಬದ್ಧಳೂ ಅಲ್ಲ ಬಂಧಮೋಚಕಳೂ ಅಲ್ಲ. ಆದ್ದರಿಂದ ನಾಮಾದಿಗಳಲ್ಲಿ ಅವಳು ಪರಿಗಣಿಸಲ್ಪಟ್ಟಿಲ್ಲ.

## 25. ಅಥ ನಿರ್ಧಾರಣಾಧಿಕರಣ

**ಓಂ ತನ್ನಿರ್ಧಾರಣಾರ್ಥನಿಯಮಃ ತದ್ದೃಷ್ಟೇಃ ಪೃಥಗ್ಘ್ಯ ಪ್ರತಿಬಂಧಃ ಫಲಮ್ ಓಂ**

ಈ ಅಧಿಕರಣದಲ್ಲಿ ಶ್ರವಣಮನನಾದಿಗಳ ಕಾರ್ಯಗಳನ್ನು ಹೇಳಲಾಗಿದೆ.

ಪ್ರಕೃತವಾದ ಶ್ರವಣಾದಿಉಪಾಸನೆಯೇ ವಿಷಯ. ಎಲ್ಲ ಉಪಾಸನೆಗಳನ್ನು ಮಾಡಬೇಕೋ ? ಒಂದೊಂದನ್ನು ಮಾಡಬಹುದೋ ? ಎಂದು ಸಂಶಯ. 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಇತ್ಯಾದಿ ವಿಧಿವಾಕ್ಯಗಳಲ್ಲಿ ವಿಕಲ್ಪದ್ಯೋತಕವಾದ ವಾಶಬ್ದವಾಗಲಿ ಸಮುಚ್ಚಯಾರ್ಥಕವಾದ ಚ ಶಬ್ದವಾಗಲಿ ಇಲ್ಲದಿರುವುದು ಸಂಶಯಕ್ಕೆ ಕಾರಣ.

ಎಲ್ಲ ಉಪಾಸನೆಯನ್ನು ಮಾಡಬೇಕು. ಯಾವುದಾದರೊಂದನ್ನೋ ಎರಡನ್ನೋ ಮಾಡಬಹುದೆಂದರೆ ಅದು ಯುಕ್ತವಲ್ಲ. ಉಪಾಸನೆಯು ಭಗವಂತನ ದರ್ಶನಕ್ಕಾಗಿ ಹೊರತು ಬೇರೆ ಪ್ರಯೋಜನವಿಲ್ಲ.

ಭಗವದ್ದರ್ಶನವು ಶ್ರವಣಮನನಗಳಿಂದಲೇ ಆಗುವಾಗ ಧ್ಯಾನದಿಂದ ಪ್ರಯೋಜನವಿಲ್ಲ. ದರ್ಶನ ಪ್ರತಿಬಂಧಕಗಳು ದೃಢವಾದ್ದರಿಂದ ಧ್ಯಾನದಿಂದಲೇ ಬ್ರಹ್ಮದರ್ಶನವೆಂದರೆ ಆಗ ಶ್ರವಣಮನನಗಳಿಂದ ಪ್ರಯೋಜನವಿಲ್ಲ. ಶ್ರವಣಮನನಗಳಿಂದ ಸಹಿತವಾದ ಧ್ಯಾನದಿಂದಲೇ ದರ್ಶನ ಎಂಬ ವಿಷಯದಲ್ಲಿ ಆಧಾರವೂ ಇಲ್ಲ ಆದ್ದರಿಂದ ಸಮಸ್ತ ಉಪಾಸನೆಯು ಕಾರ್ಯವಲ್ಲ.

ಕೇವಲ ಶ್ರವಣಮನನಗಳಿಂದ ದೇವರ ದರ್ಶನವಾಗುವುದಿಲ್ಲ. ತತ್ತ್ವಜ್ಞಾನವು ಶ್ರವಣದ ಫಲ. ಇದೇ ವೇದದ ಅರ್ಥ ಬೇರೆಯಲ್ಲ ಎಂಬ ನಿಶ್ಚಯವು ಮನನದ ಫಲ. ಅವೆರಡೂ ಬ್ರಹ್ಮದರ್ಶನಕ್ಕಿಂತ ಭಿನ್ನವೇ ಆಗಿವೆ. ಆದ ಕಾರಣ ಬ್ರಹ್ಮದರ್ಶನಕ್ಕಾಗಿ ಧ್ಯಾನವನ್ನು ಮಾಡಲೇಬೇಕು. ದರ್ಶನಕ್ಕೋಸ್ಕರ ಮೂರೂ ಶ್ರುತಿವಿಹಿತವಾದ್ದರಿಂದ ಮೂರನ್ನೂ ಮಾಡಬೇಕು. ಬ್ರಹ್ಮದರ್ಶನಕ್ಕೆ ಅಜ್ಞಾನ ಸಂಶಯ ವಿಪರ್ಯಯಗಳು ಪ್ರತಿಬಂಧಕಗಳು ಶ್ರವಣವು ತತ್ತ್ವಜ್ಞಾನವನ್ನು ಉಂಟುಮಾಡುವ ಮೂಲಕ ಅಜ್ಞಾನವನ್ನು ನಾಶಪಡಿಸುತ್ತದೆ. ಮನನವು ವೇದಾರ್ಥವನ್ನು ನಿರ್ಣಯಿಸುವ ಮೂಲಕ ಸಂಶಯವಿಪರ್ಯಯಗಳನ್ನು ನಿವೃತ್ತಿಪಡಿಸುತ್ತವೆ. ಆಗ ಧ್ಯಾನದಿಂದ ಬ್ರಹ್ಮದರ್ಶನ ಲಭಿಸುತ್ತದೆ. ಹೀಗೆ ಸಮಸ್ತ ಉಪಾಸನೆಯನ್ನು ಮಾಡಬೇಕು.

## 26. ಪ್ರದಾನಾಧಿಕರಣ

ಈ ಅಧಿಕರಣದಲ್ಲಿ ಗುರುಗಳ ಪ್ರೀತಿಗಳಿಸದ ಶ್ರವಣ ವ್ಯರ್ಥ ಎಂದು ಹೇಳಲಾಗಿದೆ.

**ಓಂ ಪ್ರದಾನವದೇವ ಹಿ ತದುಕ್ತಮ್ ಓಂ**

ಶ್ರವಣಮನನಾದಿಗಳೇ ವಿಷಯ. ಕೇವಲ ಶ್ರವಣಮನನಾದಿಗಳೇ ಜ್ಞಾನಸಾಧನವೋ ? ಅಥವಾ ಗುರುಪ್ರಸಾದಪೂರ್ವಕವಾದ ಶ್ರವಣಮನನಾದಿಗಳು ಜ್ಞಾನಸಾಧನವೋ ಎಂದು ಸಂಶಯ. 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಈ ವಿಧಿವಾಕ್ಯದಲ್ಲಿ ಗುರುಮುಖದಿಂದ ಶ್ರವಣಮಾಡಬೇಕು ಎಂದು ವಿಧಾನವಿಲ್ಲ. ಇದೇ ಸಂಶಯಕ್ಕೆ ಕಾರಣ.

ಪ್ರಸನ್ನನಾದ ಗುರುವಿನಿಂದಲೇ ಶ್ರವಣ ಮಾಡಬೇಕು ಎಂದು ನಿಯಮವಲ್ಲ. ಯಾವ ರೀತಿಯಾಗಿ ಶ್ರವಣಾದಿಗಳನ್ನೂ ಮಾಡಿದರೂ ಅದು ಜ್ಞಾನಸಾಧನವಾಗುತ್ತದೆ. ಶ್ರೋತವ್ಯೋ ಮಂತವ್ಯಃ ಈ ವಿಧಿವಾಕ್ಯದಲ್ಲಿ ಕೇವಲ ಶ್ರವಣಾದಿಗಳನ್ನೇ ಜ್ಞಾನಸಾಧನವೆಂದು ಹೇಳಲಾಗಿದೆ. ಜ್ಞಾನವು ಗುರುಪ್ರಸಾದಕ್ಕೆ ಅಧೀನವಾದರೆ ಜ್ಞಾನಿಗೆ ದೊರಕಬೇಕಾದ ಮೋಕ್ಷವೂ ಸಹ ಗುರುವಿನ ಅಧೀನವಾಗಬೇಕಾಗುತ್ತದೆ. ಹಾಗಾದಾಗ ಕೆಲವೊಮ್ಮೆ ಗುರುವಿನ ಕೋಪದಿಂದ ಜ್ಞಾನಿಗೂ ಮೋಕ್ಷವಿಲ್ಲದಂತಾಗುತ್ತದೆ. ಆದ್ದರಿಂದ ಜ್ಞಾನ ಪಡೆಯಲು ಗುರುವಿನ ಅಪೇಕ್ಷೆ ಇಲ್ಲ.

ಪ್ರಸನ್ನನಾದ ಗುರುವಿನ ಮುಖದಿಂದಲೇ ಶ್ರವಣಾದಿಗಳನ್ನು ಮಾಡಬೇಕು. ಅದೇ ಜ್ಞಾನಸಾಧನ. ಆಚಾರ್ಯವಾನ್ ಪುರುಷೋ ವೇದ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. ಗುರುವಿನ ಕೋಪದಿಂದಾಗಿ ಜ್ಞಾನಿಯು ಮೋಕ್ಷದಿಂದ ವಂಚಿತನಾಗುವದಿಲ್ಲ. ಮೋಕ್ಷವು ಪರಮಾತ್ಮನ ಅಧೀನ-ವಾದರೂ ಗುರುಶಾಪದಿಂದ ಮೋಕ್ಷದಲ್ಲಿ ಆನಂದಹ್ರಾಸವಾಗುತ್ತದೆ. ಆದ್ದರಿಂದ ಗುರುಪ್ರದಾನವು ಆವಶ್ಯಕವೇ ಆಗಿದೆ.

## 27. ಗುರುಪ್ರಸಾದಾಧಿಕರಣ

ಈ ಅಧಿಕರಣದಲ್ಲಿ ಗುರುಪ್ರೀತಿಸಂಪಾದನೆ ಬಹಳ ಮುಖ್ಯ ಎಂದು ಹೇಳಲಾಗಿದೆ.

**ಓಂ ಲಿಂಗಭೂಯಸ್ತ್ವಾತ್ ತದ್ಧಿಬಲೀಯಸ್ತದಪಿ ಓಂ**

ಗುರುಪ್ರಸಾದಪೂರ್ವಕವಾದ ಶ್ರವಣಾದಿಗಳು ವಿಷಯ. ಗುರುಪ್ರಸಾದವು ಬಲಿಷ್ಠವೋ ? ಶ್ರವಣಾದಿರೂಪ ಶಿಷ್ಯಪ್ರಯತ್ನವು ಬಲಿಷ್ಠವೋ ? ಅಥವಾ ಎರಡೂ ಸಮವೋ ? ಕೆಲವು ಕಡೆ ಇತಿಕರ್ತವ್ಯತಾ ಪ್ರಾಬಲ್ಯ, ಕೆಲವು ಸ್ಥಳದಲ್ಲಿ ಸಾಧನಪ್ರಾಬಲ್ಯವೂ, ಮತ್ತೆ ಕೆಲವು ಸ್ಥಳದಲ್ಲಿ ಸಮಾನತೆಯೂ ಕಾಣುತ್ತಿರುವುದೇ ಸಂಶಯಕ್ಕೆ ಕಾರಣ.

ಶ್ರವಣಾದಿರೂಪ ಶಿಷ್ಯಪ್ರಯತ್ನವೇ ಬಲಿಷ್ಠ. ಗುರುಪ್ರಸಾದವು ಕೇವಲ ಸಹಕಾರಿ. ಸಾಧನಕ್ಕಿಂತಲೂ ಸಹಕಾರಿಗೆ ಪ್ರಾಬಲ್ಯವು ಎಲ್ಲಿಯೂ ಕಂಡಿಲ್ಲ. ಶಿಷ್ಯಪ್ರಯತ್ನಕ್ಕೆ ಆಧಿಕ್ಯವಿಲ್ಲದಿದ್ದರೂ ಗುರುಶಿಷ್ಯರಲ್ಲಿ ಪುರುಷತ್ವ ಸಮಾನವಾದ್ದರಿಂದ ಧಾರಣಾದಿರೂಪ ಶಿಷ್ಯಪ್ರಯತ್ನವು ದುರ್ಬಲವಲ್ಲ. ಸಮಾನವೇ ಆಗುತ್ತದೆ. ಆದ್ದರಿಂದ ಗುರುಪ್ರಸಾದಪೂರ್ವಕವಾದ ಉಪದೇಶದ ಅಗತ್ಯವಿಲ್ಲ.

ಗುರುಪ್ರಸಾದಪೂರ್ವಕವಾದ ಪ್ರದಾನವೇ ಬಲಿಷ್ಠ. ಅದು ಬಲಿಷ್ಠ ಎಂಬ ವಿಷಯದಲ್ಲಿ ಅನೇಕ ಲಿಂಗಗಳು ಕಂಡಿದೆ. ಸತ್ಯಕಾಮನು ಋಷಭಾದಿಗಳಿಂದ ಬ್ರಹ್ಮವಿದ್ಯೆಯನ್ನು ಶ್ರವಣ ಮಾಡಿದರೂ ಗುರುಗಳಾದ ಗೌತಮರಲ್ಲಿ ಹೋಗಿ ಮತ್ತೆ ಆ ವಿದ್ಯೆಗಾಗಿ ಪ್ರಾರ್ಥಿಸುವನು. ಆಗ ಅವನು ಋಷಭಾದಿಗಳಲ್ಲಿ ಶ್ರವಣಮಾಡಿದ್ದಕ್ಕೆ ಗೌತಮರು ತಮ್ಮ ಅನುಮತಿಯನ್ನು ನೀಡುವರು. ಅದೇ ರೀತಿ ಉಪಕೋಸಲನು ಅಗ್ನಿದೇವತೆಗಳಿಂದ ಬ್ರಹ್ಮವಿದ್ಯೆಯ ಶ್ರವಣ ಮಾಡಿದ್ದರೂ ಗುರುಗಳಾದ ಸತ್ಯಕಾಮರಿಂದ ಪುನಃ ವಿದ್ಯೋಪದೇಶವನ್ನು ಪಡೆಯುವನು. ಶ್ರವಣಾದಿಗಳೇ ಪ್ರಬಲವಾಗಿದ್ದಲ್ಲಿ ಮೇಲಿನ ಎಲ್ಲ ಪ್ರಸಂಗಗಳಲ್ಲೂ ಪುನಃ ವಿದ್ಯೆಗಾಗಿ ಪ್ರಾರ್ಥನೆಯನ್ನು ಮಾಡಬಾರದಿತ್ತು. ಗುರುಗಳೂ ಉಪದೇಶಿಸಬಾರದಿತ್ತು. ಆಚಾರ್ಯರಿಂದ ಪಡೆದ ವಿದ್ಯೆಯೇ ಮಂಗಳಕ್ಕೆ ಕಾರಣವಾಗುವದು ಎಂದು ಉಪನಿಷತ್ತಿನ ವಾಕ್ಯವಿದೆ. ಆದ್ದರಿಂದ ಗುರುಪ್ರಸಾದವೇ ಬಲಿಷ್ಠವೆಂದು ತಿಳಿಯುತ್ತದೆ. ಗುರುಶಿಷ್ಯರಲ್ಲಿ ಪುರುಷತ್ವ ಸಮಾನವಾಗಿದ್ದರೂ ಗುರುತ್ವಶಿಷ್ಯತ್ವಗಳಂತೆ ಅವರ ಪ್ರಯತ್ನದಲ್ಲಿಯೂ ನ್ಯೂನಾಧಿಕಭಾವವು ಸಂಭವಿಸುವುದರಿಂದ ಪುರುಷತ್ವವು ಅಪ್ರಯೋಜಕ. ಯಾಗೀಯ ಹಿಂಸಾವು ಪಾಪಜನಕವಾಗಿದ್ದರೂ ಮಂತ್ರಾದಿ ಇತಿಕರ್ತವ್ಯತಾಬಲದಿಂದ ಪುಣ್ಯಜನಕವಾಗಿ ಪ್ರಬಲವಾಗಿರುವಂತೆ ಗುರುಪ್ರಸಾದವು ಇತಿಕರ್ತವ್ಯತಾರೂಪವಾಗಿದ್ದರೂ ಪ್ರಬಲವಾಗಿದೆ. 'ಶ್ರೋತವ್ಯೋ ಮಂತವ್ಯೋ' ಎಂದು ಶ್ರುತಿ ಹಾಗೂ 'ಗುರುಪ್ರಸಾದೋ ಬಲವಾನ್ ನ ತಸ್ಮಾತ್ ಬಲವತ್ತರಂ' ಎಂದು ಸ್ಮೃತಿ ಇರುವ ಪ್ರಯುಕ್ತ ಶ್ರವಣಾದಿಗಳನ್ನೂ ಮಾಡಬೇಕು. ಆದ್ದರಿಂದ ಗುರುಗಳ ಉಪದೇಶವು ಆಗತ್ಯವಾಗಿದೆ.

## 28. ಪೂರ್ವವಿಕಲ್ಪಾಧಿಕರಣ

ಈ ಅಧಿಕರಣದಲ್ಲಿ ಯಾವ ಗುರುವನ್ನು ತ್ಯಜಿಸಿ ಎಂತಹ ಗುರುವಿನಲ್ಲಿ ಅಧ್ಯಯನ ನಡೆಸಬೇಕು ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ಎರಡು ಸೂತ್ರಗಳಿವೆ.

ಭಗವದ್ದರ್ಶನವು ಶ್ರವಣಮನನಗಳಿಂದಲೇ ಆಗುವಾಗ ಧ್ಯಾನದಿಂದ ಪ್ರಯೋಜನವಿಲ್ಲ. ದರ್ಶನ ಪ್ರತಿಬಂಧಕಗಳು ದೃಢವಾದ್ದರಿಂದ ಧ್ಯಾನದಿಂದಲೇ ಬ್ರಹ್ಮದರ್ಶನವೆಂದರೆ ಆಗ ಶ್ರವಣಮನನಗಳಿಂದ ಪ್ರಯೋಜನವಿಲ್ಲ. ಶ್ರವಣಮನನಗಳಿಂದ ಸಹಿತವಾದ ಧ್ಯಾನದಿಂದಲೇ ದರ್ಶನ ಎಂಬ ವಿಷಯದಲ್ಲಿ ಆಧಾರವೂ ಇಲ್ಲ ಆದ್ದರಿಂದ ಸಮಸ್ತ ಉಪಾಸನೆಯು ಕಾರ್ಯವಲ್ಲ.

ಕೇವಲ ಶ್ರವಣಮನನಗಳಿಂದ ದೇವರ ದರ್ಶನವಾಗುವುದಿಲ್ಲ. ತತ್ತ್ವಜ್ಞಾನವು ಶ್ರವಣದ ಫಲ. ಇದೇ ವೇದದ ಅರ್ಥ ಬೇರೆಯಲ್ಲ ಎಂಬ ನಿಶ್ಚಯವು ಮನನದ ಫಲ. ಆವೆರಡೂ ಬ್ರಹ್ಮದರ್ಶನಕ್ಕಿಂತ ಭಿನ್ನವೇ ಆಗಿದೆ. ಆದ ಕಾರಣ ಬ್ರಹ್ಮದರ್ಶನಕ್ಕಾಗಿ ಧ್ಯಾನವನ್ನು ಮಾಡಲೇಬೇಕು. ದರ್ಶನಕ್ಕೋಸ್ಕರ ಮೂರೂ ಶ್ರುತಿವಿಹಿತವಾದ್ದರಿಂದ ಮೂರನ್ನೂ ಮಾಡಬೇಕು. ಬ್ರಹ್ಮದರ್ಶನಕ್ಕೆ ಅಜ್ಞಾನ ಸಂಶಯ ವಿಪರ್ಯಯಗಳು ಪ್ರತಿಬಂಧಕಗಳು ಶ್ರವಣವು ತತ್ತ್ವಜ್ಞಾನವನ್ನು ಉಂಟುಮಾಡುವ ಮೂಲಕ ಅಜ್ಞಾನವನ್ನು ನಾಶಪಡಿಸುತ್ತದೆ. ಮನನವು ವೇದಾರ್ಥವನ್ನು ನಿರ್ಣಯಿಸುವ ಮೂಲಕ ಸಂಶಯವಿಪರ್ಯಯಗಳನ್ನು ನಿವೃತ್ತಿಪಡಿಸುತ್ತವೆ. ಆಗ ಧ್ಯಾನದಿಂದ ಬ್ರಹ್ಮದರ್ಶನ ಲಭಿಸುತ್ತದೆ. ಹೀಗೆ ಸಮಸ್ತ ಉಪಾಸನೆಯನ್ನು ಮಾಡಬೇಕು.

## 26. ಪ್ರದಾನಾಧಿಕರಣ

ಈ ಅಧಿಕರಣದಲ್ಲಿ ಗುರುಗಳ ಪ್ರೀತಿಗಳಿಸದ ಶ್ರವಣ ವ್ಯರ್ಥ ಎಂದು ಹೇಳಲಾಗಿದೆ.

**ಓಂ ಪ್ರದಾನವದೇವ ಹಿ ತದುಕ್ತಮ್ ಓಂ**

ಶ್ರವಣಮನನಾದಿಗಳೇ ವಿಷಯ. ಕೇವಲ ಶ್ರವಣಮನನಾದಿಗಳೇ ಜ್ಞಾನಸಾಧನವೋ ? ಅಥವಾ ಗುರುಪ್ರಸಾದಪೂರ್ವಕವಾದ ಶ್ರವಣಮನನಾದಿಗಳು ಜ್ಞಾನಸಾಧನವೋ ಎಂದು ಸಂಶಯ. 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಈ ವಿಧಿವಾಕ್ಯದಲ್ಲಿ ಗುರುಮುಖದಿಂದ ಶ್ರವಣಮಾಡಬೇಕು ಎಂದು ವಿಧಾನವಿಲ್ಲ. ಇದೇ ಸಂಶಯಕ್ಕೆ ಕಾರಣ.

ಪ್ರಸನ್ನನಾದ ಗುರುವಿನಿಂದಲೇ ಶ್ರವಣ ಮಾಡಬೇಕು ಎಂದು ನಿಯಮವಲ್ಲ. ಯಾವ ರೀತಿಯಾಗಿ ಶ್ರವಣಾದಿಗಳನ್ನೂ ಮಾಡಿದರೂ ಅದು ಜ್ಞಾನಸಾಧನವಾಗುತ್ತದೆ. ಶ್ರೋತವ್ಯೋ ಮಂತವ್ಯಃ ಈ ವಿಧಿವಾಕ್ಯದಲ್ಲಿ ಕೇವಲ ಶ್ರವಣಾದಿಗಳನ್ನೇ ಜ್ಞಾನಸಾಧನವೆಂದು ಹೇಳಲಾಗಿದೆ. ಜ್ಞಾನವು ಗುರುಪ್ರಸಾದಕ್ಕೆ ಅಧೀನವಾದರೆ ಜ್ಞಾನಿಗೆ ದೊರಕಬೇಕಾದ ಮೋಕ್ಷವೂ ಸಹ ಗುರುವಿನ ಅಧೀನವಾಗಬೇಕಾಗುತ್ತದೆ. ಹಾಗಾದಾಗ ಕೆಲವೊಮ್ಮೆ ಗುರುವಿನ ಕೋಪದಿಂದ ಜ್ಞಾನಿಗೂ ಮೋಕ್ಷವಿಲ್ಲದಂತಾಗುತ್ತದೆ. ಆದ್ದರಿಂದ ಜ್ಞಾನ ಪಡೆಯಲು ಗುರುವಿನ ಅಪೇಕ್ಷೆ ಇಲ್ಲ.

ಪ್ರಸನ್ನನಾದ ಗುರುವಿನ ಮುಖದಿಂದಲೇ ಶ್ರವಣಾದಿಗಳನ್ನು ಮಾಡಬೇಕು. ಅದೇ ಜ್ಞಾನಸಾಧನ. ಆಚಾರ್ಯವಾನ್ ಪುರುಷೋ ವೇದ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. ಗುರುವಿನ ಕೋಪದಿಂದಾಗಿ ಜ್ಞಾನಿಯು ಮೋಕ್ಷದಿಂದ ವಂಚಿತನಾಗುವದಿಲ್ಲ. ಮೋಕ್ಷವು ಪರಮಾತ್ಮನ ಅಧೀನ-ವಾದರೂ ಗುರುಶಾಪದಿಂದ ಮೋಕ್ಷದಲ್ಲಿ ಆನಂದಹ್ರಾಸವಾಗುತ್ತದೆ. ಆದ್ದರಿಂದ ಗುರುಪ್ರದಾನವು ಆವಶ್ಯಕವೇ ಆಗಿದೆ.

## 27. ಗುರುಪ್ರಸಾದಾಧಿಕರಣ

ಈ ಅಧಿಕರಣದಲ್ಲಿ ಗುರುಪ್ರೀತಿಸಂಪಾದನೆ ಬಹಳ ಮುಖ್ಯ ಎಂದು ಹೇಳಲಾಗಿದೆ.

**ಓಂ ಲಿಂಗಭೂಯಸ್ತ್ವಾತ್ ತದ್ಧಿಬಲೀಯಸ್ತದಪಿ ಓಂ**

ಗುರುಪ್ರಸಾದಪೂರ್ವಕವಾದ ಶ್ರವಣಾದಿಗಳು ವಿಷಯ. ಗುರುಪ್ರಸಾದವು ಬಲಿಷ್ಠವೋ ? ಶ್ರವಣಾದಿರೂಪ ಶಿಷ್ಯಪ್ರಯತ್ನವು ಬಲಿಷ್ಠವೋ ? ಅಥವಾ ಎರಡೂ ಸಮವೋ ? ಕೆಲವು ಕಡೆ ಇತಿಕರ್ತವ್ಯತಾ ಪ್ರಾಬಲ್ಯ, ಕೆಲವು ಸ್ಥಳದಲ್ಲಿ ಸಾಧನಪ್ರಾಬಲ್ಯವೂ, ಮತ್ತೆ ಕೆಲವು ಸ್ಥಳದಲ್ಲಿ ಸಮಾನತೆಯೂ ಕಾಣುತ್ತಿರುವುದೇ ಸಂಶಯಕ್ಕೆ ಕಾರಣ.

ಶ್ರವಣಾದಿರೂಪ ಶಿಷ್ಯಪ್ರಯತ್ನವೇ ಬಲಿಷ್ಠ. ಗುರುಪ್ರಸಾದವು ಕೇವಲ ಸಹಕಾರಿ. ಸಾಧನಕ್ಕಿಂತಲೂ ಸಹಕಾರಿಗೆ ಪ್ರಾಬಲ್ಯವು ಎಲ್ಲಿಯೂ ಕಂಡಿಲ್ಲ. ಶಿಷ್ಯಪ್ರಯತ್ನಕ್ಕೆ ಆಧಿಕ್ಯವಿಲ್ಲದಿದ್ದರೂ ಗುರುಶಿಷ್ಯರಲ್ಲಿ ಪುರುಷತ್ವ ಸಮಾನವಾದ್ದರಿಂದ ಧಾರಣಾದಿರೂಪ ಶಿಷ್ಯಪ್ರಯತ್ನವು ದುರ್ಬಲವಲ್ಲ. ಸಮಾನವೇ ಆಗುತ್ತದೆ. ಆದ್ದರಿಂದ ಗುರುಪ್ರಸಾದಪೂರ್ವಕವಾದ ಉಪದೇಶದ ಆಗತ್ಯವಿಲ್ಲ.

ಗುರುಪ್ರಸಾದಪೂರ್ವಕವಾದ ಪ್ರದಾನವೇ ಬಲಿಷ್ಠ. ಅದು ಬಲಿಷ್ಠ ಎಂಬ ವಿಷಯದಲ್ಲಿ ಅನೇಕ ಲಿಂಗಗಳು ಕಂಡಿದೆ. ಸತ್ಯಕಾಮನು ಋಷಭಾದಿಗಳಿಂದ ಬ್ರಹ್ಮವಿದ್ಯೆಯನ್ನು ಶ್ರವಣ ಮಾಡಿದರೂ ಗುರುಗಳಾದ ಗೌತಮರಲ್ಲಿ ಹೋಗಿ ಮತ್ತೆ ಆ ವಿದ್ಯೆಗಾಗಿ ಪ್ರಾರ್ಥಿಸುವನು. ಆಗ ಅವನು ಋಷಭಾದಿಗಳಲ್ಲಿ ಶ್ರವಣಮಾಡಿದ್ದಕ್ಕೆ ಗೌತಮರು ತಮ್ಮ ಅನುಮತಿಯನ್ನು ನೀಡುವರು. ಅದೇ ರೀತಿ ಉಪಕೋಸಲನು ಅಗ್ನಿದೇವತೆಗಳಿಂದ ಬ್ರಹ್ಮವಿದ್ಯೆಯ ಶ್ರವಣ ಮಾಡಿದ್ದರೂ ಗುರುಗಳಾದ ಸತ್ಯಕಾಮರಿಂದ ಪುನಃ ವಿದ್ಯೋಪದೇಶವನ್ನು ಪಡೆಯುವನು. ಶ್ರವಣಾದಿಗಳೇ ಪ್ರಬಲವಾಗಿದ್ದಲ್ಲಿ ಮೇಲಿನ ಎಲ್ಲ ಪ್ರಸಂಗಗಳಲ್ಲೂ ಪುನಃ ವಿದ್ಯೆಗಾಗಿ ಪ್ರಾರ್ಥನೆಯನ್ನು ಮಾಡಬಾರದಿತ್ತು. ಗುರುಗಳೂ ಉಪದೇಶಿಸಬಾರದಿತ್ತು. ಆಚಾರ್ಯರಿಂದ ಪಡೆದ ವಿದ್ಯೆಯೇ ಮಂಗಳಕ್ಕೆ ಕಾರಣವಾಗುವದು ಎಂದು ಉಪನಿಷತ್ತಿನ ವಾಕ್ಯವಿದೆ. ಆದ್ದರಿಂದ ಗುರುಪ್ರಸಾದವೇ ಬಲಿಷ್ಠವೆಂದು ತಿಳಿಯುತ್ತದೆ. ಗುರುಶಿಷ್ಯರಲ್ಲಿ ಪುರುಷತ್ವ ಸಮಾನವಾಗಿದ್ದರೂ ಗುರುತ್ವಶಿಷ್ಯತ್ವಗಳಂತೆ ಅವರ ಪ್ರಯತ್ನದಲ್ಲಿಯೂ ನ್ಯೂನಾಧಿಕಭಾವವು ಸಂಭವಿಸುವುದರಿಂದ ಪುರುಷತ್ವವು ಅಪ್ರಯೋಜಕ. ಯಾಗೀಯ ಹಿಂಸಾವು ಪಾಪಜನಕವಾಗಿದ್ದರೂ ಮಂತ್ರಾದಿ ಇತಿಕರ್ತವ್ಯತಾಬಲದಿಂದ ಪುಣ್ಯಜನಕವಾಗಿ ಪ್ರಬಲವಾಗಿರುವಂತೆ ಗುರುಪ್ರಸಾದವು ಇತಿಕರ್ತವ್ಯತಾರೂಪವಾಗಿದ್ದರೂ ಪ್ರಬಲವಾಗಿದೆ. 'ಶ್ರೋತವ್ಯೋ ಮಂತವ್ಯೋ' ಎಂದು ಶ್ರುತಿ ಹಾಗೂ 'ಗುರುಪ್ರಸಾದೋ ಬಲವಾನ್ ನ ತಸ್ಮಾತ್ ಬಲವತ್ತರಂ' ಎಂದು ಸ್ಮೃತಿ ಇರುವ ಪ್ರಯುಕ್ತ ಶ್ರವಣಾದಿಗಳನ್ನೂ ಮಾಡಬೇಕು. ಆದ್ದರಿಂದ ಗುರುಗಳ ಉಪದೇಶವು ಆಗತ್ಯವಾಗಿದೆ.

## 28. ಪೂರ್ವವಿಕಲ್ಪಾಧಿಕರಣ

ಈ ಅಧಿಕರಣದಲ್ಲಿ ಯಾವ ಗುರುವನ್ನು ತ್ಯಜಿಸಿ ಎಂತಹ ಗುರುವಿನಲ್ಲಿ ಅಧ್ಯಯನ ನಡೆಸಬೇಕು ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ಎರಡು ಸೂತ್ರಗಳಿವೆ.

**ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ**
**ಓಂ ಅತಿದೇಶಾಚ್ಚ ಓಂ**

ಗುರುಗಳೇ ಈ ಅಧಿಕರಣದ ವಿಷಯ. ಪ್ರಥಮಪ್ರಾಪ್ತರಾದ ಗುರುಗಳೇ ಎಂದು ನಿಯಮವೋ ಅಥವಾ ಪ್ರಥಮಪ್ರಾಪ್ತಗುರುಗಳನ್ನು ಪರಿತ್ಯಜಿಸಿ ಮತ್ತೊಬ್ಬರನ್ನು ಸ್ವೀಕರಿಸಬಹುದೋ ಎಂದು ಸಂಶಯ. ಲೋಕದಲ್ಲಿ ಪೂರ್ವಪ್ರಾಪ್ತನಾದ ಸ್ವಾಮಿಯ ಪರಿತ್ಯಾಗ ಅಪರಿತ್ಯಾಗ ಎರಡೂ ಸಹ ಭೃತ್ಯಾದಿಗಳಲ್ಲಿ ಕಂಡಿರುವುದು ಸಂಶಯಕ್ಕೆ ಕಾರಣ.

ಪ್ರಥಮಪ್ರಾಪ್ತರಾದ ಗುರುಗಳನ್ನು ಪರಿತ್ಯಜಿಸಲು ಕಾರಣವಿಲ್ಲ. ಏಕೆಂದರೆ ಗುರುವಿನ ಪರಿಗ್ರಹ- ಮಾತ್ರದಿಂದಲೇ ಮಂಗಳವಾಗುತ್ತದೆ. ಮತ್ತು ಕಾರಣವಿಲ್ಲದೆ ಗುರುಪರಿತ್ಯಾಗದಿಂದ ದೋಷವೂ ಸಂಭವಿಸುವುದು 'ಗುರುತ್ಯಾಗೇ ಭವೇನ್ಮೃತ್ಯುಃ ಮಂತ್ರತ್ಯಾಗೇ ದರಿದ್ರತಾ' 'ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್' ಎಂದು ಪ್ರಮಾಣವಿದೆ. ಆದ್ದರಿಂದ ಪೂರ್ವಪ್ರಾಪ್ತನಾದ ಗುರುವನ್ನೇ ಆಶ್ರಯಿಸಿರಬೇಕು. ಆದ್ದರಿಂದ ಸರ್ವಜ್ಞನಾದ ಗುರುವು ಪ್ರಥಮಪ್ರಾಪ್ತನಲ್ಲದಿದ್ದರೆ ಸರ್ವಜ್ಞರಾದ ಗುರುಗಳ ಉಪದೇಶದಿಂದ ಯೋಗ್ಯತೆಯ ನಿಶ್ಚಯವಾಗುತ್ತದೆ ಎಂದು ಹೇಳಿದ್ದು ಅಯುಕ್ತವಾಗುತ್ತದೆ.

ಪೂರ್ವಪ್ರಾಪ್ತರಾದವರೇ ಗುರುಗಳೆಂದು ನಿಯಮವಿಲ್ಲ. ಏಕೆಂದರೆ ಸಮಗ್ರ ಅನುಗ್ರಹಕ್ಕಾಗಿ ಇನ್ನೊಬ್ಬ ಗುರುವಿನ ಪರಿಗ್ರಹ. ಇನ್ನೊಬ್ಬ ಗುರುಗಳು ಸಮಗ್ರ ಅನುಗ್ರಹವನ್ನು ಮಾಡುವದಾದರೆ ಅವರನ್ನೂ ಗುರುಗಳೆಂದು ಪರಿಗ್ರಹಿಸಬೇಕು. ಹಿಂದಿನ ಗುರುವಿನ ಸಮಾನನಾದವನು ಅಥವಾ ಅವನಿಗಿಂತ ಅಧಿಕನಾದವನು ಸಮಗ್ರ ಅನುಗ್ರಹವನ್ನು ಮಾಡುವದಾದರೆ ಅವನನ್ನು ಗುರುವೆಂದು ಸ್ವೀಕರಿಸಬೇಕು. ಅಧಮನನ್ನು ಸ್ವೀಕರಿಸಲೇಬಾರದು. ಸಮಗ್ರ ಅನುಗ್ರಹವನ್ನು ಮಾಡುವದಿಲ್ಲವಾದರೆ ಉತ್ತಮನಾದರೂ ಸ್ವೀಕರಿಸಬಾರದು. ಸಮಗ್ರಾನುಗ್ರಹವನ್ನು ಮಾಡುವವನು ಉತ್ತಮನಾದಲ್ಲಿ ಹಿಂದಿನ ಗುರುವಿನ ಅನುಮತಿಯ ಅಪೇಕ್ಷೆಯಿಲ್ಲದೇ ನಿಸ್ಸಂಶಯವಾಗಿ ಸ್ವೀಕರಿಸಬೇಕು. ಇಬ್ಬರೂ ಗುರುಗಳು ಜ್ಞಾನಾದಿಗಳಲ್ಲಿ ಸಮನಾಗಿದ್ದರೆ ಆಗ ವಿಕಲ್ಪ. ಸಮನಾದ ಫಲವನ್ನು ಹೊಂದಿರುವ ಎರಡು ಧ್ಯಾನಗಳಲ್ಲಿ ಯಾವ ಧ್ಯಾನವನ್ನು ಬೇಕಾದರೂ ಮಾಡಬಹುದು. ಅದರಂತೆ ಸಮಾನತೆಯನ್ನು ಹೊಂದಿರುವ ಗುರುಗಳಲ್ಲಿ ಹಿಂದಿನ ಗುರುಗಳ ಅನುಮತಿಯನ್ನು ಪಡೆದು ನಂತರದವರನ್ನು ಸ್ವೀಕರಿಸಬಹುದು ಅಥವಾ ಬಿಡಬಹುದು. ಹೀಗೆ ಸರ್ವಜ್ಞಗುರುವಿನ ಸ್ವೀಕಾರವು ಉಪಪನ್ನವಾದ್ದರಿಂದ ಅವರ ಉಪದೇಶದಂತೆ ಉಪಾಸನೆಯನ್ನು ಮಾಡಬೇಕು.

## 29. ವಿದ್ಯಾಧಿಕರಣ

ಈ ಅಧಿಕರಣದಲ್ಲಿ ಅಪರೋಕ್ಷಜ್ಞಾನವೇ ಮೋಕ್ಷಸಾಧನ ಎಂದು ಹೇಳಲಾಗಿದೆ. ಇಲ್ಲಿ ಎರಡು ಸೂತ್ರಗಳಿವೆ.

**ಓಂ ವಿದ್ಯೈವ ತು ನಿರ್ಧಾರಣಾತ್ ಓಂ**
**ಓಂ ದರ್ಶನಾಚ್ಚ ಓಂ**

ಪ್ರಕೃತವಾದ ಭಗವದುಪಾಸನೆಯೇ ವಿಷಯ. ಅದನ್ನು ಮಾಡಬೇಕೋ ಅಥವಾ ಮಾಡಬಾರದೋ ಎಂದು ಸಂಶಯ. ವಿಷಭಕ್ಷಣ ಅನ್ನಭಕ್ಷಣ  ಹೀಗೆ ಎರಡು ವಿಧ ಕ್ರಿಯೆಯು ಕಂಡಿರುವುದೇ ಸಂಶಯಕ್ಕೆ ಕಾರಣ.

ಭಗವಂತನ ಉಪಾಸನೆಯೇ ವ್ಯರ್ಥ. ಜ್ಞಾನವೇ ಮೋಕ್ಷಸಾಧನವೆಂದು ನಿಶ್ಚಯವಾಗಿದ್ದಲ್ಲಿ ಜ್ಞಾನ-ಕ್ಕೋಸ್ಕರ ಉಪಾಸನೆ ಎನ್ನಬಹುದಿತ್ತು. ಆದರೆ ಜ್ಞಾನವೇ ಮೋಕ್ಷಸಾಧನವೆಂದು ನಿಶ್ಚಿತವಾಗಿಲ್ಲ. 'ತರತಿ ಶೋಕಮಾತ್ಮವಿತ್' ಎಂದು ಶ್ರುತಿ ಇರುವಂತೆ ಕರ್ಮವು ಮೋಕ್ಷಸಾಧನವೆನ್ನುವ 'ಕರ್ಮಣೈವ ಹಿ ಸಂಸಿದ್ಧಿಮ್' ಎನ್ನುವ ಪ್ರಮಾಣವಚನಗಳೂ ಇದೆ. ಆದ್ದರಿಂದ ಜ್ಞಾನಕ್ಕಾಗಿ ಭಗವಂತನ ಉಪಾಸನೆಯ ಅಗತ್ಯವಿಲ್ಲ.

ಜ್ಞಾನಕ್ಕಾಗಿ ಉಪಾಸನೆಯನ್ನು ಮಾಡಲೇಬೇಕು. ಏಕೆಂದರೆ ಜ್ಞಾನವೇ ಮೋಕ್ಷಸಾಧನ. 'ತಮೇವಂ ವಿದಿತ್ವಾ' ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. 'ನಾನ್ಯ ಪಂಥಾಃ ವಿದ್ಯತೇ ಅಯನಾಯ' ಎಂದು ಶ್ರುತಿಯು ಜ್ಞಾನಕ್ಕಿಂತ ಬೇರೆ ಮಾರ್ಗಗಳನ್ನು ನಿಷೇಧಿಸುತ್ತಿದೆ. ಆದ್ದರಿಂದ ಅದು ಸ್ಮೃತಿಗಿಂತ ಪ್ರಬಲ. ಹೀಗಾಗಿ ಜ್ಞಾನಕ್ಕಾಗಿ ಉಪಾಸನೆಯನ್ನು ಮಾಡಲೇಬೇಕು.

## 30. ಅಬಾಧಾಧಿಕರಣ

**ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ**

ಈ ಅಧಿಕರಣದಲ್ಲಿ ಕರ್ಮದಿಂದ ಮೋಕ್ಷ ಎಂಬ ಶ್ರುತಿಗಳ ವಿರೋಧವಿಲ್ಲ ಎಂದು ಹೇಳಲಾಗಿದೆ. ಪ್ರಕೃತವಾದ ಮೋಕ್ಷವೇ ವಿಷಯ. ಅದು ಜ್ಞಾನಸಾಧ್ಯವೋ ಅಥವಾ ಕರ್ಮಸಾಧ್ಯವೋ ಎಂದು ಸಂಶಯ. ವಿವಾದವೇ ಸಂಶಯಕ್ಕೆ ಕಾರಣ.

ಮೋಕ್ಷಕ್ಕೆ ಕರ್ಮವೇ ಸಾಧನ ಈ ವಿಷಯದಲ್ಲಿ 'ಕರ್ಮಣೈವ ಹಿ ಸಂಸಿದ್ಧಿಮ್' ಎಂಬ ಸ್ಮೃತಿವಾಕ್ಯವು ಪ್ರಮಾಣವಾಗಿದೆ. ಜ್ಞಾನದಿಂದಲೇ ಮೋಕ್ಷವೆಂದು ಹೇಳುವ ಶ್ರುತಿ ಇದ್ದರೂ 'ಕರ್ಮಣೈವ ಹಿ ಸಂಸಿದ್ಧಿಮ್' ಎಂಬ ಸ್ಮೃತಿಯು ಭಗವಂತನ ವಾಕ್ಯವಾದ್ದರಿಂದ ಶ್ರುತಿಗಿಂತಲೂ ಪ್ರಬಲವಾಗಿದೆ. ಹೀಗೆ ಸ್ಮೃತಿಯೂ ಅವಧಾರಣಸಹಿತವಾಗಿ ಆಪ್ತವಾಕ್ಯವೂ ಆಗಿರುವದರಿಂದ ವಿದ್ಯಾಶ್ರುತಿಯು ಬಾಧಿತವಾಗುತ್ತದೆ. ಆದ ಕಾರಣ ಜ್ಞಾನವು ಮೋಕ್ಷಸಾಧನವಲ್ಲ. ಉಪಾಸನೆಯು ವ್ಯರ್ಥ.

ಮೋಕ್ಷವು ಜ್ಞಾನಸಾಧ್ಯವೇ ಆಗಿದೆ. ಕರ್ಮಸಾಧ್ಯವಲ್ಲ. ಮೋಕ್ಷವು ಜ್ಞಾನಸಾಧ್ಯ ಎಂಬ ವಿಷಯದಲ್ಲಿ ಬಲಿಷ್ಠವಾದ ಶ್ರುತಿ ಲಿಂಗ ಸ್ಮೃತಿಗಳು ಪ್ರಮಾಣವಾಗಿವೆ. 'ನಾನ್ಯಃ ಪಂಥಾಃ ವಿದ್ಯತೇ ಅಯನಾಯ' ಎಂಬ ಶ್ರುತಿಯು ಇತರ ಮಾರ್ಗಗಳನ್ನು ನಿಷೇಧಿಸುತ್ತವೆ. ಹೀಗೆ ನಿರವಕಾಶವಾದ ಅವಧಾರಣಯುಕ್ತವಾದ್ದರಿಂದ ಶ್ರುತಿಯೇ ಪ್ರಬಲವಾಗಿದೆ. ಇಂದ್ರನು ಬಹುಕರ್ಮವನ್ನು ಆಚರಿಸಿದ್ದರೂ ಮೋಕ್ಷಪ್ರಾಪ್ತಿಗಾಗಿ ತತ್ತ್ವಜ್ಞಾನ ಪ್ರಾರ್ಥನೆ ಮಾಡಿದನೆಂಬ ಲಿಂಗವೂ ಶ್ರುತಿಪ್ರಸಿದ್ಧವಾಗಿದೆ. 'ನಾಸ್ತ್ಯಕೃತಃ ಕೃತೇನ' ಎಂಬ ಶ್ರುತಿಯಿಂದ ಕರ್ಮವು ಉತ್ಪತ್ತಿವಿನಾಶವುಳ್ಳ ಫಲಕ್ಕೆ ಮಾತ್ರ ಕಾರಣವೆಂದು ನಿಶ್ಚಯವಾಗಿರುವುದರಿಂದ ನಿತ್ಯವಾದ ಮೋಕ್ಷಫಲಕ್ಕೆ ಕರ್ಮವು ಕಾರಣವಾಗಲಾರದು ಎಂಬ ಯುಕ್ತಿಯೂ ಪ್ರಬಲವಾಗಿದೆ. 'ಕರ್ಮಣಾ ಬಧ್ಯತೇ

